# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– I | ಬೆಂಗಳೂರು, ಸೋಮವಾರ, ಫೆಬ್ರವರಿ ೦೨, ೨೦೧೫ (ಮಾಘ ೧೩, ಶಕ ವರ್ಷ ೧೯೩೬) | ನಂ. ೯೫ |
| **Part– I** | **Bangalore, Monday, February 02, 2015 (Magha 13, Shaka Varsha 1936)** | **No. 95** |


**ಕರ್ನಾಟಕ ಸರ್ಕಾರದ ನಡವಳಿಗಳು**

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ :** ಮಹಾನಗರ ಪಾಲಿಕೆಗಳ ವಾರ್ಡುಗಳಿಗೆ ವಿವಿಧ ಪ್ರವರ್ಗಗಳ ಮೀಸಲಾತಿಯನ್ನು ಆವರ್ತನೆ ಮೇಲೆ ನಿಗಧಿಪಡಿಸುವ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ನಅಇ/310/ಎಂಎಲ್ಆರ್/2012. ದಿನಾಂಕ:09.11.2012 ಹಾಗೂ 15.11.2012

ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 13 ಶಾಸನ 2012, ದಿನಾಂಕ:30.08.2012 (Karnataka Act No. 32 of 2012).

**ಪ್ರಸ್ತಾವನೆ:**

ರಿಟ್ ಅರ್ಜಿಸಂಖ್ಯೆ:39572/2000 c/w 31, 189 ಮತ್ತು 795/2001 (ಎಲ್‌ಬಿ–ಪಿಐಎಲ್)ರಲ್ಲಿ ನ್ಯಾಯಾಲಯವು ನೀಡಿರುವ ಆದೇಶಗಳನುಸಾರ ನಗರ ಸ್ಥಳೀಯ ಸಂಸ್ಥೆಗಳಿಗೆ ಆವರ್ತನೆಯ ತತ್ವದ ಮೇರೆಗೆ ಮೀಸಲಾತಿಯನ್ನು ನಿಗದಿಪಡಿಸುವ ಬಗ್ಗೆ ಹೊಸದಾದ ಪ್ರಕ್ರಿಯೆಯನ್ನು ನಡೆಸಲು ಬದ್ಧವಾಗಿರುವುದಾಗಿ ಸರ್ಕಾರವು ತಿಳಿಸಿರುತ್ತದೆ. ಇದಲ್ಲದೇ ಸಾರ್ವಜನಿಕರ ಮಾಹಿತಿಗಾಗಿ ಮಾರ್ಗಸೂಚಿಗಳನ್ನು ಪ್ರಕಟಿಸಿ, ಅನಂತರ ಚುನಾವಣೆಗಳನ್ನು ಮಾರ್ಗಸೂಚನೆಗಳನುಸಾರ ನಡೆಸಲಾಗುವುದಾಗಿ ಒಪ್ಪಲಾಗಿರುತ್ತದೆ. ಅದರಂತೆ ಸರ್ಕಾರವು ಆದೇಶ ಸಂಖ್ಯೆ:ನಅಇ 4 ಎಂಎಲ್ಆರ್ 2001, ದಿನಾಂಕ:26/02/2001ರಲ್ಲಿ ಮಾರ್ಗಸೂಚಿಗಳನ್ನು ಹೊರಡಿಸಿ ಚುನಾವಣೆಗಳನ್ನು ನಡೆಸಲಾಗಿರುತ್ತದೆ.

ಭಾರತ ಸಂವಿಧಾನದ ಅನುಚ್ಛೇದ 243(ಟಿ) ಪ್ರಕಾರ ಹಾಗೂ 1976ರ ಕರ್ನಾಟಕ ಪೌರನಿಗಮಗಳ ಅಧಿನಿಯಮದ ಕಲಂ 7ರ ಉಪ ಕಲಂ (2) (3) ಮತ್ತು (4)ರನ್ವಯ ಹಾಗೂ ಮೇಲೆ ಓದಲಾದ 2ರ ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 13 ಶಾಸನ 2012, ದಿನಾಂಕ 30.08.2012ರಲ್ಲಿ ಪ್ರಕಟಿಸಿರುವಂತೆ.

1. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ–ಎ ಪ್ರವರ್ಗ, ಹಿಂದುಳಿದವರ್ಗ–ಬಿ ಪ್ರವರ್ಗ ಮತ್ತು ಮಹಿಳೆಯರಿಗೆ ಸ್ಥಾನಗಳ ಮೀಸಲಾತಿ, ಮತ್ತು
2. ಸ್ಥಾನಗಳನ್ನು ಆವರ್ತನೆಯ ಮೇರೆಗೆ ಹಂಚಿಕೆ ಮಾಡತಕ್ಕದ್ದೆಂದು ತಿಳಿಸಲಾಗಿದೆ.

ಕೇಂದ್ರ ಸರ್ಕಾರದ ಜನಗಣತಿ ನಿರ್ದೇಶನಾಲಯವು 2011ರ ಜನಗಣತಿಯ ಅಂಕಿ ಅಂಶಗಳನ್ನು ಅಧಿಕೃತವಾಗಿ ಪ್ರಕಟಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿನ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಈ ನಂತರದಲ್ಲಿ ನಡೆಯುವ ರಾಜ್ಯಗಳಲ್ಲಿನ ಮಹಾನಗರಪಾಲಿಕೆಗಳಿಗೆ ನಡೆಯುವ ಚುನಾವಣೆಗಳಿಗೆ ವಿವಿಧ ಪ್ರವರ್ಗಗಳ ಮೀಸಲಾತಿಯನ್ನು ಆವರ್ತನೆ ಮೇಲೆ ವಾರ್ಡುಗಳಿಗೆ ನಿಗಧಿಪಡಿಸುವ ಬಗ್ಗೆ ಈ ಕೆಳಕಂಡಂತೆ ಮಾರ್ಗಸೂಚಿಗಳನ್ನು ಹೊರಡಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**<u>ಸರ್ಕಾರದ ಆದೇಶ ಸಂಖ್ಯೆ: ನಅಇ 240 ಎಂಎಲ್ಆರ್ 2013, ಬೆಂಗಳೂರು, ದಿನಾಂಕ: 02.02.2015</u>**

2012–13ನೇ ಸಾಲಿನಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆಯನ್ನು ನಡೆಸುವ ಸಲುವಾಗಿ ಸರ್ಕಾರದ ಆದೇಶ ಸಂಖ್ಯೆ: ನಅಇ 310 ಎಂಎಲ್ಆರ್ 2012, ದಿನಾಂಕ 09.11.2012 ಹಾಗೂ 15.11.2012ರಲ್ಲಿ ಹೊರಡಿಸಿರುವ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಈ ನಂತರ ನಡೆಯುವ ಮಹಾನಗರ ಪಾಲಿಕೆಗಳ ಚುನಾವಣೆಗಳಿಗೆ, ವಿವಿಧ ಪ್ರವರ್ಗಗಳಿಗೆ ಸೇರಿದ ಸದಸ್ಯರುಗಳಿಗೆ ವಿವಿಧ ವಾರ್ಡ್‌ಗಳಿಗೆ ಆವರ್ತನೆ ಮೇಲೆ ಮೀಸಲಾದ ಸ್ಥಾನಗಳಿಗೆ ಹಂಚಿಕೆ ಮಾಡುವಾಗ ಈ ಕೆಳಕಂಡ ಮಾರ್ಗದರ್ಶನಗಳನ್ನು ಗಮನದಲ್ಲಿಟ್ಟುಕೊಂಡು ವಿವಿಧ ವಾರ್ಡುಗಳಿಗೆ ಮೀಸಲಾತಿಯನ್ನು ನಿಗಧಿಪಡಿಸುವುದು:

1. 1976ರ ಕರ್ನಾಟಕ ಪೌರನಿಗಮಗಳ ಅಧಿನಿಯಮದ ಕಲಂ 7ರ ಉಪ ಕಲಂ (2) (3) ಮತ್ತು (4)ರನ್ವಯ ಹಾಗೂ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 13 ಶಾಸನ 2012, ದಿನಾಂಕ 30.08.2012 (Karnataka Act No. 32 of 2012.) ರಲ್ಲಿರುವಂತೆ 2011ರ ಜನಗಣತಿ ಅನ್ವಯ ಪರಿಷ್ಕರಿಸಿ ಸ್ಥಾನಗಳನ್ನು ಹಂಚಿಕೆ ಮಾಡತಕ್ಕದ್ದು.

2. ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಗಳಿಗಾಗಿ ಮೀಸಲಿರಿಸಬಹುದಾದ ಸ್ಥಾನಗಳ ಸಂಖ್ಯೆಯು ಆಯಾ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿನ ಒಟ್ಟು ಜನಸಂಖ್ಯೆಯ ಒಟ್ಟು ಸ್ಥಾನಗಳ ಸಂಖ್ಯೆಗೆ ಅನುಗುಣವಾಗಿ ನಿಗಧಿಪಡಿಸತಕ್ಕದ್ದು. ಪರಿಶಿಷ್ಟ ಜಾತಿಗೆ ಸಂಬಂಧಪಟ್ಟ ಅಭ್ಯರ್ಥಿಯು ಲಭ್ಯವಾಗದಿದ್ದಂತಹ ಸಂದರ್ಭದಲ್ಲಿ, ವಿಪರ್ಯಯವಾಗಿ, ಸದರಿ ಸ್ಥಾನವನ್ನು ಪರಿಶಿಷ್ಟ ಪಂಗಡಕ್ಕೆ ಸಂಬಂಧಪಟ್ಟ ಅಭ್ಯರ್ಥಿಯಿಂದ ಭರ್ತಿ ಮಾಡಬಹುದಾಗಿದೆ (vice versa).

3. ಹಿಂದುಳಿದ ವರ್ಗಗಳಿಗೆ ಮೀಸಲಾತಿಯನ್ನು ನಿಗಧಿಪಡಿಸುವಾಗ ಒಟ್ಟು ವಾರ್ಡಿನ ಸಂಖ್ಯೆಯಲ್ಲಿ 1/3 ರಷ್ಟು ವಾರ್ಡುಗಳನ್ನು ಹಿಂದುಳಿದ ವರ್ಗಗಳಿಗೆ ನಿಗಧಿಪಡಿಸಬೇಕು. ಈ ರೀತಿ ನಿಗಧಿಪಡಿಸುವಾಗ ಒಟ್ಟು ಮೀಸಲಾತಿಯಲ್ಲಿ ಶೇ. 50 ರಷ್ಟು ಮೀರಬಾರದಾಗಿರುತ್ತದೆ (Reserved Categories). ಈ ರೀತಿ ಲೆಕ್ಕ ಹಾಕುವಾಗ ಒಟ್ಟು ಮೀಸಲಾತಿಯಲ್ಲಿ ಶೇ. 50 ರಷ್ಟು ಜಾಸ್ತಿ ಬರುವ ಸಂದರ್ಭ ಇದ್ದಲ್ಲಿ, ಅವುಗಳನ್ನು ಹಿಂದುಳಿದ ವರ್ಗಗಳ ಮೀಸಲಾತಿಯಲ್ಲಿ ಕಡಿತಗೊಳಿಸಬೇಕಾಗುತ್ತದೆ.

4. ಹಿಂದುಳಿದ ವರ್ಗಗಳಿಗಾಗಿ ಮೀಸಲಿರಿಸಬಹುದಾದ ಸ್ಥಾನಗಳ ಶೇ. 80 ರಷ್ಟು ಸ್ಥಾನಗಳನ್ನು ಪ್ರವರ್ಗ "ಎ" ರಲ್ಲಿ ಬರುವ ಅಭ್ಯರ್ಥಿಗಳಿಗಾಗಿ ಮತ್ತು ಇನ್ನುಳಿದ ಶೇ. 20 ರಷ್ಟು ಸ್ಥಾನಗಳನ್ನು ಪ್ರವರ್ಗ "ಬಿ" ರಲ್ಲಿ ಬರುವ ಅಭ್ಯರ್ಥಿಗಳಿಗಾಗಿ ಮೀಸಲಿರಿಸತಕ್ಕದ್ದು. ಪ್ರವರ್ಗ "ಎ" ರಲ್ಲಿ ಬರುವ ಅಭ್ಯರ್ಥಿಗಳು ಲಭ್ಯವಿಲ್ಲದ ಸಂದರ್ಭದಲ್ಲಿ, ವಿಪರ್ಯಯವಾಗಿ, ಅಂತಹ ಸ್ಥಾನಗಳನ್ನು ಪ್ರವರ್ಗ "ಬಿ" ರಲ್ಲಿ ಬರುವಂತಹ ಅಭ್ಯರ್ಥಿಗಳಿಗಾಗಿ ಮೀಸಲಿರಿಸಬಹುದಾಗಿದೆ (vice versa).

5. ಇನ್ನುಳಿದಂತೆ, ಮೇಲ್ಕಂಡ ನಮೂನೆಯಲ್ಲಿ ಹಂಚಿಕೆ ಮಾಡಿ ಉಳಿದ ಸ್ಥಾನಗಳನ್ನು ಮೀಸಲೇತರ (ಸಾಮಾನ್ಯ) ಪ್ರವರ್ಗವೆಂದು ವರ್ಗೀಕರಿಸತಕ್ಕದ್ದು. ಈ ರೀತಿ ನಿಗಧಿಪಡಿಸುವಾಗ ಒಟ್ಟು ಸ್ಥಾನಗಳಲ್ಲಿ ಕನಿಷ್ಟ ಶೇ. 50 ರಷ್ಟು ಸ್ಥಾನಗಳನ್ನು ಸಾಮಾನ್ಯ (General) ವರ್ಗಕ್ಕೆ ನಿಗಧಿಪಡಿಸತಕ್ಕದ್ದು.

6. ಪ್ರತಿಯೊಂದು ಪ್ರವರ್ಗದಲ್ಲಿ ಅಂದರೆ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ಪ್ರವರ್ಗ 'ಎ' ಮತ್ತು 'ಬಿ' ಮತ್ತು ಮೀಸಲೇತರ (ಸಾಮಾನ್ಯ) ಸ್ಥಾನಗಳಲ್ಲಿ ಶೇ. 50 ಮೀರದಂತೆ ಸ್ಥಾನಗಳನ್ನು ಮಹಿಳೆಯರಿಗಾಗಿ ಮೀಸಲಿಡತಕ್ಕದ್ದು.

7. ಯಾವುದೇ ಪ್ರವರ್ಗದಲ್ಲಿ ಕೇವಲ ಒಂದೇ ಒಂದು ಸ್ಥಾನವು ಲಭ್ಯವಾಗುವಂತಹ ಸಂದರ್ಭದಲ್ಲಿ ಸದರಿ ಸ್ಥಾನವನ್ನು ಆಯಾ ಪ್ರವರ್ಗಕ್ಕೆ ಸಂಬಂಧಿಸಿದಂತಹ ಮಹಿಳೆಯರಿಗಾಗಿ ಮೀಸಲಿರಿಸತಕ್ಕದ್ದು.

8. ಸ್ಥಾನಗಳನ್ನು ಆವರ್ತನೆಯ ತತ್ವದ ಆಧಾರದ ಮೇರೆಗೆ, ಪ್ರವರ್ಗ ಲಕ್ಷಿಸದೇ, ಮೀಸಲಿರಿಸತಕ್ಕದ್ದು.

9. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ಸಂಬಂಧಿಸಿದಂತೆ ಸ್ಥಾನಗಳ ಆವರ್ತನೆಯನ್ನು ಮಾಡುವ ಸಂದರ್ಭದಲ್ಲಿ ಆವರ್ತನೆ ತತ್ವವನ್ನು ಅನ್ವಯಿಸುವಾಗ ವಾರ್ಡುಗಳಲ್ಲಿ ಇಳಿಮುಖವಾಗುವ ಜನಸಂಖ್ಯೆಯನ್ನು ಪರಿಗಣಿಸತಕ್ಕದ್ದು.

10. ಆವರ್ತನೆಯ ತತ್ವದ ಮೇರೆಗೆ ಸ್ಥಾನಗಳ ಹಂಚಿಕೆ ಮಾಡುವಾಗ, ಇನ್ನುಳಿದ ಪ್ರವರ್ಗಗಳಿಗೆ ಸಂಬಂಧಿಸಿದಂತೆ, ಈ ಹಿಂದಿನ ಅವಧಿಯಲ್ಲಿ ಮೀಸಲಿರಿಸಲಾಗಿದ್ದ ಪ್ರವರ್ಗಗಳು ಪುನರಾವರ್ತನೆಯಾಗದಂತೆ ಎಚ್ಚರಿಕೆ ವಹಿಸತಕ್ಕದ್ದು. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗ ಪ್ರವರ್ಗ "ಎ" ಮತ್ತು ಪ್ರವರ್ಗ "ಬಿ" ಅಥವಾ ಮಹಿಳೆಯರಿಗಾಗಿ ಹಿಂದಿನ ಅವಧಿಯಲ್ಲಿ ಸ್ಥಾನವನ್ನು ಮೀಸಲಾಗಿರಿಸಿದ್ದ ಸಂದರ್ಭದಲ್ಲಿ ಮುಂಬರುವ ಅವಧಿಯಲ್ಲಿ ಅದೇ ಪ್ರವರ್ಗಕ್ಕೆ ಸಾಧ್ಯವಾದಷ್ಟು ಪುನರಾವರ್ತನೆಯಾಗದಂತೆ ಎಚ್ಚರಿಕೆವಹಿಸತಕ್ಕದ್ದು.

11. ಮೀಸಲೇತರ (ಸಾಮಾನ್ಯ) ಸ್ಥಾನಗಳಿಗೆ ಸಂಬಂಧಿಸಿದಂತೆ, ಮೀಸಲೇತರ ಸ್ಥಾನಗಳಾಗಿರುವ ಕಾರಣ, ಪುನರಾವರ್ತನೆಯೆಂದು ಪರಿಗಣಿಸತಕ್ಕದ್ದಲ್ಲ.

12. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಾತಿಯನ್ನು ನಿಗಧಿಪಡಿಸುವಾಗ ಅತೀ ಹೆಚ್ಚು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಂಖ್ಯೆಯಿರುವ ವಾರ್ಡುಗಳಿಗೆ ಅದಕ್ಕನುಸಾರವಾಗಿ ಪ್ರಸ್ತುತ ಸಾಲಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮೀಸಲಾತಿಯನ್ನು ನಿಗದಿಪಡಿಸಲು ಕ್ರಮ ವಹಿಸುವುದು. ಒಂದು ವೇಳೆ ಈ ಹಿಂದಿನ ಸಾಲಿನಲ್ಲಿ ಈಗಾಗಲೇ ನಿಗದಿಪಡಿಸಿದ್ದರೆ ಸದರಿ ವಾರ್ಡುಗಳನ್ನು ಹೊರತುಪಡಿಸಿ ತದನಂತರ ಅತೀ ಹೆಚ್ಚು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಂಖ್ಯೆ ಇರುವ ವಾರ್ಡುಗಳಿಗೆ ಪ್ರಸ್ತುತ ಸಾಲಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮೀಸಲಾತಿಯನ್ನು ನಿಗದಿಪಡಿಸಲು ಕ್ರಮ ವಹಿಸುವುದು ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಾತಿಯನ್ನು ನಿಗದಿಪಡಿಸುವಾಗ ಈ ಅನುಕ್ರಮದ (Sequence) ಪ್ರಕಾರ ಮೀಸಲಾತಿಯನ್ನು ನಿಗದಿಪಡಿಸತಕ್ಕದ್ದು.

SCW → ST → SC → STW

ಈ ರೀತಿ ನಿಗಧಿಪಡಿಸಿದ ನಂತರ ಉಳಿದ ಪ್ರವರ್ಗಗಳಿಗೆ ಈ ಅನುಕ್ರಮದಲ್ಲಿ (Sequence) ಪ್ರತಿ ವಾರ್ಡುಗಳಿಗೆ ಮೀಸಲಾತಿಯನ್ನು ನಿಗದಿಪಡಿಸತಕ್ಕದ್ದು.

"BCAW → G → BCBW → G → BCA → GW → BCB "

13. ಈ ಮೇಲೆ ತಿಳಿಸಿರುವ ಮಾರ್ಗಸೂಚಿಯನ್ವಯ ಎಲ್ಲಾ ಮಹಾನಗರ ಪಾಲಿಕೆಗಳಿಗೆ ವಿವಿಧ ಪ್ರವರ್ಗಗಳಿಗೆ ಮೀಸಲಾತಿಯನ್ನು ಆವರ್ತನೆ ಮೇಲೆ ನಿಗಧಿಪಡಿಸಿ ಕರಡು ಅಧಿಸೂಚನೆಯನ್ನು ಹೊರಡಿಸಿ, ಸದರಿ ಅಧಿಸೂಚನೆಯಿಂದ ಬಾಧಿತರಾಗುವಂತಹ

ವ್ಯಕ್ತಿಗಳಿದ್ದಲ್ಲಿ ತಮ್ಮ ಸಲಹೆ / ಆಕ್ಷೇಪಣೆಗಳನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಲಿಖಿತ ಮೂಲಕ ಸಲ್ಲಿಸಲು 7 ದಿನಗಳ ಕಾಲಾವಕಾಶ ನೀಡತಕ್ಕದ್ದು.

14. ಸರ್ಕಾರವು ಹೊರಡಿಸಿರುವ ಕರಡು ಅಧಿಸೂಚನೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಈ ಕೆಳಕಂಡಂತೆ ಕ್ರಮವಹಿಸತಕ್ಕದ್ದು.

i. ಸಾರ್ವಜನಿಕರಿಗೆ ಮಾಹಿತಿಗಾಗಿ ಸರ್ಕಾರವು ಹೊರಡಿಸಿರುವ ಕರಡು ಅಧಿಸೂಚನೆಯನ್ನು ಪ್ರಕಟಿಸಿ ಆಯಾ ಜಿಲ್ಲೆಗಳಲ್ಲಿ ವ್ಯಾಪಕ ಪ್ರಚಾರ ನೀಡುವುದು.

ii. ಜಿಲ್ಲಾಧಿಕಾರಿಗಳು ಸಾರ್ವಜನಿಕರು ನಿಗಧಿತ ಸಮಯದಲ್ಲಿ ಸಲಹೆ / ಆಕ್ಷೇಪಣೆಗಳು ಲಿಖಿತ ಮೂಲಕ ಸಲ್ಲಿಸಿದಲ್ಲಿ, ಅವುಗಳನ್ನು ಸ್ವೀಕರಿಸಿ ಪುಸ್ತಕದಲ್ಲಿ ದಾಖಲಿಸುವುದು.

iii. ಜಿಲ್ಲಾಧಿಕಾರಿಗಳು ಸಲಹೆ / ಆಕ್ಷೇಪಣೆಗಳನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದೊಳಗೆ ಬಂದಂತಹ ಸಲಹೆ/ ಆಕ್ಷೇಪಣೆಗಳನ್ನು ನಿಯಮಾನುಸಾರ ಪರಿಶೀಲಿಸಿ, ಸಲಹೆ/ಆಕ್ಷೇಪಣೆಗಳ ಪ್ರತಿಯೊಂದಿಗೆ ಸರ್ಕಾರಕ್ಕೆ ಕಡ್ಡಾಯವಾಗಿ **ಮರು ದಿನವೇ** ಖುದ್ದಾಗಿ ಕಳುಹಿಸುವ ವ್ಯವಸ್ಥೆ ಮಾಡುವುದು.

15. ಸರ್ಕಾರವು ಜಿಲ್ಲಾಧಿಕಾರಿಗಳಿಂದ ಬಂದಂತಹ ಪ್ರಸ್ತಾವನೆಯನ್ನು ನಿಯಮಾನುಸಾರ ಪರಿಶೀಲಿಸಿ ಸೂಕ್ತ ಕ್ರಮ ತೆಗೆದುಕೊಂಡು ಅಂತಿಮ ಅಧಿಸೂಚನೆಯನ್ನು ಪ್ರಕಟಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ – I | ಬೆಂಗಳೂರು, ಮಂಗಳವಾರ, ಮಾರ್ಚ್ ೨೪, ೨೦೧೫ (ಚೈತ್ರ ೦೩, ಶಕ ವರ್ಷ ೧೯೩೭) | ನಂ. ೨೩೪ |
|---|---|---|
| Part – I | Bengaluru, Tuesday, March 24, 2015 (Chaithra 03, Shaka Varsha 1937) | No. 234 |


## ಕರ್ನಾಟಕ ಸರ್ಕಾರದ ನಡವಳಿಗಳು

### ಕಂದಾಯ ಸಚಿವಾಲಯ

**ವಿಷಯ :** ಗಣಕೀಕೃತಗೊಂಡಿರುವ ಗ್ರಾಮ ನಕಾಶೆಗಳನ್ನು ಸಾರ್ವಜನಿಕರಿಗೆ, ಇತರೆ ಇಲಾಖೆಗಳಿಗೆ ವಿತರಿಸುವ ಕುರಿತು ಯೂಸರ್ ಚಾರ್ಜ್ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :** ಎಸ್.ಎಸ್.ಎಲ್.ಆರ್.ಟಿ.ಎನ್.ಎಲ್.ಡಿ.ಐ.ಜಿ.ಐ. ಮ್ಯಾಪ್–004/2013–14, ದಿನಾಂಕ : 28–04–2014 ಮತ್ತು 18–11–2014

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಇವರ ಪತ್ರಗಳಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಸಂಸ್ಥೆಯ ಸಹಯೋಗದೊಂದಿಗೆ, ರಾಜ್ಯದ ಎಲ್ಲಾ ಗ್ರಾಮ ನಕಾಶೆಗಳ ಸ್ಕ್ಯಾನಿಂಗ್ ಕಾರ್ಯ ಪೂರ್ಣಗೊಳಿಸಿ, ಸ್ಕ್ಯಾನಿಂಗ್ ಆದ ಮಾಹಿತಿಯನ್ನು ಗಣಕಯಂತ್ರದಲ್ಲಿ ಸಂರಕ್ಷಿಸಿ ಇಡಲಾಗಿದೆಯೆಂದು ಸಾರ್ವಜನಿಕರಿಂದ, ಸರ್ಕಾರದ ಇತರೆ ಯೋಜನೆಗಳಿಗಾಗಿ ರಾಜ್ಯದ ಗ್ರಾಮ ನಕಾಶೆಗಳ ಸ್ಕ್ಯಾನ್ ಆದ ಸಾಫ್ಟ್ ಕಾಪಿ ಕೋರಿ ಇತರೆ ಕಂಪೆನಿಗಳಿಂದ ಬೇಡಿಕೆ ಬಂದಲ್ಲಿ, ಸಾರ್ವಜನಿಕರಿಗೆ ವಿತರಿಸುವ ಪ್ರತಿ ನಕಾಶೆಗೂ, ನಕಾಶೆ ಶುಲ್ಕದೊಂದಿಗೆ ತಲಾ ರೂ. 100.00 ಸೇವಾಶುಲ್ಕ ಪ್ರತ್ಯೇಕವಾಗಿ ಪಾವತಿಸಿಕೊಂಡು ಹಾಗೂ ಸಿ.ಡಿ. ಮಾಧ್ಯಮದಲ್ಲಿ ಸಾಫ್ಟ್ ಕಾಪಿ ನಕಲು ವಿತರಿಸುವಾಗಲೂ, ಪ್ರತಿ ನಕಾಶೆಗೂ, ನಕಾಶೆ ಶುಲ್ಕದೊಂದಿಗೆ ತಲಾ ರೂ. 100.00 ಸೇವಾ ಶುಲ್ಕ ಮತ್ತು ಸಿ.ಡಿ. ಶುಲ್ಕ ರೂ. 50.00 ಪ್ರತ್ಯೇಕವಾಗಿ ಪಾವತಿಸಿಕೊಂಡಿ ವಿತರಿಸಲಾಗುತ್ತಿದೆಯೆಂದು ತಿಳಿಸಿರುತ್ತಾರೆ.

ಮುಂದುವರೆದು, ಪ್ರಸ್ತುತ ನಕಾಶೆಗಳ ಗಣಕೀಕರಣ ಕಾರ್ಯವು ಬಹುತೇಕ ಪೂರ್ಣಗೊಂಡಿದ್ದು, ಸದರಿ ನಕಾಶೆಗಳನ್ನು ಕೋರಿ ಸಾರ್ವಜನಿಕರಿಂದ, ಇತರೆ ಇಲಾಖೆಗಳಿಂದ, ಕಂಪೆನಿಗಳಿಂದ ಬೇಡಿಕೆ ಬರುತ್ತಿದೆ. ಆದರೆ ಗಣಕೀಕೃತ ನಕಾಶೆಯ ಸಾಫ್ಟ್ ಕಾಪಿ ವಿತರಿಸುವುದರಿಂದ, ನಕಾಶೆ ಪಡೆದ ನಂತರ ಇತರೆ ಇಲಾಖೆಯವರಾಗಲೀ, ಸಂಘ–ಸಂಸ್ಥೆ, ಸಾರ್ವಜನಿಕರಾಗಲೀ, ನಕಾಶೆಯನ್ನು ಮಾರ್ಪಾಡು ಮಾಡಿ ದುರುಪಯೋಗ ಮಾಡಲು ಅವಕಾಶವಿರುವ ಕಾರಣ, ಇದನ್ನು ತಡೆಗಟ್ಟಲು ವಿತರಿಸುವ ಮುನ್ನವೇ ಸಾಕಷ್ಟು ಮುಂಜಾಗ್ರತೆ ವಹಿಸಿ, ಇಲಾಖೆ ಕಡೆಯಿಂದ ಷರತ್ತುಗಳನ್ನು ವಿಧಿಸಿ, ನಂತರ ನಕಾಶೆಯನ್ನು ವಿತರಿಸಲು ಕ್ರಮ ವಹಿಸಿ ದುರುಪಯೋಗ ತಡೆಗಟ್ಟುವುದು ಅತ್ಯವಶ್ಯಕವಾಗಿರುತ್ತದೆ ಎಂದು ತಿಳಿಸುತ್ತಾ, ಈ ನಿಟ್ಟಿನಲ್ಲಿ ಸಾರ್ವಜನಿಕರಿಗೆ, ಇತರೆ ಇಲಾಖೆ, ಸಂಘ–ಸಂಸ್ಥೆಗಳಿಗೆ ಗಣಕೀಕೃತ ನಕಾಶೆ ಪೂರೈಸುವ ಹಾಗೂ ವಿತರಿಸುವ ಪ್ರತಿ ನಕಾಶೆಗೆ ಅದಕ್ಕೆ ಖರ್ಚಾಗುವ ಸ್ಟೇಷನರಿ ಅಂದರೆ, ವಿದ್ಯುಚ್ಛಕ್ತಿ, ಉಪಕರಣ ನಿರ್ವಹಣಾ ವೆಚ್ಚ ಇವುಗಳೆಲ್ಲವನ್ನೂ ಸರಿದೂಗಿಸಲು, ನಿಗದಿತ ಯೂಸರ್ ಚಾರ್ಜ್ ನಿಗದಿಪಡಿಸುವ ಬಗ್ಗೆ ಹಾಗೂ ವಿತರಿಸುವ ಗಣಕೀಕೃತ ಸಾಫ್ಟ್ ಕಾಪಿಯ ದುರುಪಯೋಗ ತಡೆಗಟ್ಟಲು ಡಿಜಿಟಲ್ ಸಹಿಯೊಂದಿಗೆ ನಕಾಶೆಗಳನ್ನು ವಿತರಿಸಲು ಕ್ರಮ ಕೈಗೊಳ್ಳಬಹುದಾಗಿರುತ್ತದೆ. ಡಿಜಿಟಲ್ ಸಹಿ ಪದ್ಧತಿಯನ್ನು ಈಗಾಗಲೇ ಭೂಮಿ ಯೋಜನೆಯಲ್ಲಿ ಜಾರಿಗೊಳಿಸಿರುವಂತೆ ಈ ಕಾರ್ಯದಲ್ಲಿಯೂ ಅಳವಡಿಸಿದಲ್ಲಿ ಸಾಫ್ಟ್ ಕಾಪಿ ಮಾಹಿತಿಯು ತಿದ್ದುಪಡಿಯಾಗಿದ್ದಲ್ಲಿ, ಡಿಜಿಟಲ್ ಸಹಿ ಮೂಲಕ ಪತ್ತೆ ಹಚ್ಚಲು ಸಾಧ್ಯವಾಗುವುದರಿಂದ ಈ ಪದ್ಧತಿಯನ್ನು ಅಳವಡಿಸಿಕೊಳ್ಳುವ ಬಗ್ಗೆ ಸೂಕ್ತ ಆದೇಶ ಕೋರಿದ್ದಾರೆ.

ಆಯುಕ್ತಗರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 143 ಭೂದಾಸ 2014, ಬೆಂಗಳೂರು, ದಿನಾಂಕ : 11.03.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗಣಕೀಕೃತಗೊಂಡಿರುವ ಗ್ರಾಮ ನಕಾಶೆಗಳನ್ನು ಸಾರ್ವಜನಿಕರಿಗೆ ಹಾಗೂ ಇತರೆ ಇಲಾಖೆಗಳಿಗೆ ವಿತರಿಸುವ ಕುರಿತು ಶುಲ್ಕ ನಿಗದಿಪಡಿಸಲು ಅನುವಾಗುವಂತೆ ಆದೇಶವನ್ನು ಹೊರಡಿಸುವ ಸಂಬಂಧ ಸಾರ್ವಜನಿಕರಿಗೆ ಹಾಗೂ ಇತರೆ ಸಂಘ–ಸಂಸ್ಥೆಗಳಿಗೆ ವಿತರಿಸುವ ಗಣಕೀಕೃತ ನಕಾಶೆಗಳ ದುರುಪಯೋಗ ತಡೆಗಟ್ಟುವ ಸಲುವಾಗಿ, ಗಣಕೀಕೃತ ಡಿಜಿಟಲ್ ಸಹಿ ಅಳವಡಿಸಿಕೊಳ್ಳಲು ಹಾಗೂ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಿಂದ ಸಾರ್ವಜನಿಕರಿಗೆ ಹಾಗೂ ಇತರೆ ಇಲಾಖೆಗಳಿಗೆ ಗಣಕೀಕೃತ ಗ್ರಾಮ ನಕಾಶೆಗಳಿಗೆ ಮುದ್ರಿತ ನಕಾಶೆ ಶುಲ್ಕದ ಹತ್ತು ಪಟ್ಟು ಶುಲ್ಕ ಹಾಗೂ ಮುದ್ರಣ ಸೇವಾ ಶುಲ್ಕ ರೂ. 100/–ನ್ನು ವಿಧಿಸಲು ಸರ್ಕಾರದ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಪಿ. ರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂಮಾಪನ)

# ವಿಶೇಷ ರಾಜ್ಯ ಪತ್ರಿಕೆ


| ಭಾಗ – I | ಬೆಂಗಳೂರು, ಶನಿವಾರ, ಮಾರ್ಚ್ ೨೮, ೨೦೧೫ (ಚೈತ್ರ ೦೭, ಶಕ ವರ್ಷ ೧೯೩೭) | ನಂ. ೨೪೨ |
|---|---|---|
| **Part – I** | **Bengaluru, Saturday, March 28, 2015 (Chaithra 07, Shaka Varsha 1937)** | **No. 242** |


## ಕರ್ನಾಟಕ ಸರ್ಕಾರದ ನಡವಳಿಗಳು

## ಪ್ರವಾಸೋದ್ಯಮ ಸಚಿವಾಲಯ

ವಿಷಯ: ಕರ್ನಾಟಕ ಪ್ರವಾಸೋದ್ಯಮ ನೀತಿ 2015–20ನ್ನು ಜಾರಿಗೆ ತರಲು ಅನುಮೋದನೆ.

ಓದಲಾಗಿದೆ: ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 231 ಪ್ರವಾಯೋ 2007 ದಿನಾಂಕ 20–10–2009

* * *

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಪ್ರವಾಸೋದ್ಯಮ ನೀತಿ 2009–14ನ್ನು ಜಾರಿಗೆ ತರಲಾಗಿತ್ತು. ಸದರಿ ನೀತಿಯು ದಿನಾಂಕ:19–10–2014ಕ್ಕೆ ಕೊನೆಗೊಂಡಿರುತ್ತದೆ.

ಪ್ರವಾಸೋದ್ಯಮವನ್ನು ಆರ್ಥಿಕತೆಯ ಆದ್ಯತಾ ವಲಯ ಎಂದು ಪರಿಗಣಿಸಲಾಗುತ್ತಿದ್ದು, ದೇಶದ ಒಟ್ಟಾರೆ ಆಂತರಿಕ ಉತ್ಪನ್ನಕ್ಕೆ ಮತ್ತು ವಿದೇಶಿ ವಿನಿಮಯ ಗಳಿಕೆಗೆ ಮಹತ್ತರವಾದ ಕೊಡುಗೆಯನ್ನು ನೀಡುತ್ತಿದೆ. ಪ್ರವಾಸೋದ್ಯಮ ಮತ್ತು ಪಾರಂಪರಿಕ ಉದ್ಯಮ ರಾಜ್ಯದ ಸಾಮಾಜಿಕ ಆರ್ಥಿಕತೆ ಮತ್ತು ಸಾಂಸ್ಕೃತಿಕ ಚಿತ್ರಣದ ಮೇಲೆ ಮಹತ್ತರ ಪ್ರಭಾವ ಹೊಂದಿರುತ್ತದೆ. ಪ್ರವಾಸೋದ್ಯಮ ಮತ್ತು ಪರಂಪರೆ ಉದ್ಯಮ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ರಾಜ್ಯದ ಜನಸಂಖ್ಯೆಯ ಗಣನೀಯ ಭಾಗಕ್ಕೆ ಜೀವನಾಧಾರ ಅವಕಾಶಗಳನ್ನು ಒದಗಿಸುತ್ತದೆ. ಇದರಲ್ಲಿ ಉಪಯೋಗ ಪಡೆಯುವವರೆಂದರೆ ಹೋಟೆಲ್‌ಗಳವರು, ರೆಸ್ಟೋರೆಂಟ್‌ಗಳು, ಪ್ರವಾಸೀ ಗೈಡ್ಸ್, ಪ್ರವಾಸ ನಿರ್ವಾಹಕರು, ಕುಶಲಕರ್ಮಿಗಳು, ನೇಕಾರರು, ಪುರಾತನ/ಉತ್ಸಾಹಿ ವಸ್ತುಗಳನ್ನು ವ್ಯವಹರಿಸುವವರು ಇತ್ಯಾದಿ ಮತ್ತಿತರ ವಿತರಕರು ಸೇರಿರುತ್ತಾರೆ. ಪ್ರವಾಸೋದ್ಯಮ ಕ್ಷೇತ್ರದಲ್ಲಿ ಸಮರ್ಪಕವಾದ ನೀತಿಯನ್ನು ಅಳವಡಿಸಿಕೊಂಡಾಗ ಮುಂದಿನ ಹತ್ತು ವರ್ಷಗಳಲ್ಲಿ:–

[1] 4.3 ಮಿಲಿಯನ್ ಹೆಚ್ಚುವರಿ ಉದ್ಯೋಗ ಸೃಷ್ಟಿಸುವ ಸಾಧ್ಯತೆ

[2] ರೂ.85,000 ಕೋಟಿ ಆದಾಯ ಉತ್ಪತ್ತಿ

[3] ರೂ.73,000.00 ಕೋಟಿಗಳ ಹೆಚ್ಚುವರಿ ಬಂಡವಾಳ ಇದರಲ್ಲಿ

ಖಾಸಗಿ ವಲಯದಿಂದ ಶೇ.50ರಷ್ಟು ನಿರೀಕ್ಷೆ.

ಒಂದು ರಚನಾತ್ಮಕ ಪ್ರವಾಸೋದ್ಯಮ ನೀತಿಯು ಅಭಿವೃದ್ಧಿಯ ಸೂಚ್ಯಂಕಗಳ ಮೇಲೆ ಪರಿಣಾಮ ಬೀರುವುದಲ್ಲದೆ, ಕೇಂದ್ರ ಮತ್ತು ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಆದಾಯವನ್ನು ತರುತ್ತದೆ. ಈ ಹಿನ್ನೆಲೆಯಲ್ಲಿ ರಾಷ್ಟ್ರೀಯ ಪ್ರವಾಸೋದ್ಯಮ ನೀತಿಯ ಸರಿಸಮಾನವಾಗಿ ಹಾಗೂ ಸಹಸ್ರಮಾನದ ಅಭಿವೃದ್ಧಿಯ ಗುರಿಗಳ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರವು ಆಗಿಂದಾಗ್ಗೆ ಪ್ರಚಲಿತದಲ್ಲಿರುವ ಪ್ರವಾಸೋದ್ಯಮ ನೀತಿಯನ್ನು ಪರಿಷ್ಕರಿಸುವುದು ಅತ್ಯಗತ್ಯವಾಗಿರುತ್ತದೆ. ವಿದೇಶಿ ಬಂಡವಾಳವನ್ನು ಆಕರ್ಷಿಸಲು ಮತ್ತು ಪ್ರವಾಸಿಗರಿಗೆ ಸೂಕ್ತ ರಕ್ಷಣೆ, ಹಿತಕರ ಮತ್ತು ಶಾಶ್ವತವಾದ ಅನುಭವ ನೀಡಲು ಅನೇಕ ರಾಜ್ಯಗಳು ಅವರ ಪ್ರವಾಸೋದ್ಯಮ ನೀತಿಯನ್ನು ಪರಿಷ್ಕರಿಸಿರುತ್ತವೆ.

ಪ್ರಚಲಿತದಲ್ಲಿರುವ ಕರ್ನಾಟಕ ಪ್ರವಾಸೋದ್ಯಮ ನೀತಿಯನ್ನು 2009–14ರ ಅವಧಿಗೆ ರೂಪಿಸಲಾಗಿತ್ತು. ಸದರಿ ನೀತಿಯು ದಿನಾಂಕ: 19–10–2014ಕ್ಕೆ ಕೊನೆಗೊಂಡಿರುತ್ತದೆ. ನೀತಿಯ ಅವಧಿಯಲ್ಲಿ 950 ಕೋಟಿ ಬಂಡವಾಳವನ್ನು ಒಳಗೊಂಡ 318 ಯೋಜನಾ ಪ್ರಸ್ತಾವನೆಗಳಿಗೆ ಪ್ರವಾಸೋದ್ಯಮ ಇಲಾಖೆ ಅನುಮೋದನೆ ನೀಡಿರುತ್ತದೆ. 126 ಯೋಜನೆಗಳು ನೀತಿ ಅವಧಿಯಲ್ಲಿ ಪೂರ್ಣಗೊಂಡಿದ್ದು, ಈ ಸಂಬಂಧ ರೂ.22.00 ಕೋಟಿಗಳ ಸಹಾಯಧನವನ್ನು ವಿತರಿಸಲಾಗಿದೆ. ಈ ಯೋಜನೆಗಳಿಂದ ಅಂದಾಜು 2500 ಉದ್ಯೋಗವಕಾಶಗಳನ್ನು ಸೃಷ್ಟಿಸಲಾಗಿದೆ.

ಅಂತರರಾಷ್ಟ್ರೀಯ ಗುಣಮಟ್ಟವನ್ನು ಸರಿಸಮಾನವಾಗಿಟ್ಟುಕೊಂಡು ಕರ್ನಾಟಕವನ್ನು ಪ್ರವಾಸೋದ್ಯಮ ಅನುಭವ ತಾಣಗಳ ಸ್ಥಳವನ್ನಾಗಿ ಮಾಡಲು ಒಂದು ಮಾರ್ಗ ನಕ್ಷೆಯನ್ನು ಸಿದ್ಧಪಡಿಸುವ ಸಲುವಾಗಿ ಕರ್ನಾಟಕ ಟೂರಿಸಂ ವಿಷನ್‌ಗ್ರೂಪ್‌ನ್ನು ರಚಿಸಲಾಗಿತ್ತು. ಸದರಿ ತಂಡವು ಸರ್ಕಾರಕ್ಕೆ ಶಿಫಾರಸ್ಸುಗಳನ್ನು ಸಲ್ಲಿಸಿರುತ್ತದೆ. ಕರ್ನಾಟಕ ಪ್ರವಾಸೋದ್ಯಮದ ಅಭಿವೃದ್ಧಿ ದೃಷ್ಟಿಯಿಂದ ಕೆ.ಟಿ.ವಿ.ಜಿ., ಹಲವು ಶಿಫಾರಸ್ಸುಗಳನ್ನು ಮಾಡಿದ್ದು, ಸದರಿ ಶಿಫಾರಸ್ಸುಗಳನ್ನು ಪ್ರವಾಸೋದ್ಯಮ ನೀತಿ 2015–20ರಲ್ಲಿ ರೂಪಿಸುವಾಗ ಪರಿಗಣಿಸಲಾಗಿದೆ.

ಕರ್ನಾಟಕವನ್ನು ಭಾರತದಲ್ಲಿನ 2 ಉನ್ನತ ಪ್ರವಾಸಿ ತಾಣಗಳಲ್ಲೊಂದಾಗಿ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ 50ನೇ ಉನ್ನತ ತಾಣವಾಗಿ ಮಾಡುವ ಗುರಿ ಇಟ್ಟುಕೊಂಡು ಪ್ರವಾಸೋದ್ಯಮ ನೀತಿ 2015–20ರ ಸಿದ್ಧಪಡಿಸಲಾಗಿದೆ. ಪ್ರವಾಸೋದ್ಯಮ ಕ್ಷೇತ್ರದಲ್ಲಿನ ದೃಷ್ಟಿಕೋನವು ಕರ್ನಾಟಕವನ್ನು

ಸುರಕ್ಷಿತ, ಸುಸ್ಥಿರ ಮತ್ತು ಅತ್ಯಂತ ಒಲವಿನ ಪ್ರವಾಸಿ ತಾಣವಾಗಿ ಅಭಿವೃದ್ಧಿಗೊಳಿಸುವುದು-ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಭೇಟಿಮಾಡುವವರ ಸಂಖ್ಯೆಯನ್ನು ಹೆಚ್ಚಿಸುವುದು: ಭೇಟಿಗಾರರಿಗೆ ಉತ್ಕೃಷ್ಟ ಗುಣಮಟ್ಟದ ಅನುಭವ ಹೊಂದುವಂತೆ ಮಾಡುವುದು ಬಂಡವಾಳವನ್ನು ಸುಗಮ ಮತ್ತು ತೀವ್ರಗೊಳಿಸುವುದು ಹಾಗೂ ಸ್ಥಳೀಯ ಮಟ್ಟದಲ್ಲಿ ಜೀವನೋಪಾಯ ಅವಕಾಶಗಳನ್ನು ಸುಧಾರಿಸುವುದು:

ನೀತಿಯಲ್ಲಿನ ದೃಷ್ಟಿಕೋನವನ್ನು ಸಾಧಿಸಲು ಈ ಕ್ಷೇತ್ರದಲ್ಲಿ ಖಾಸಗಿ ಹೂಡಿಕೆದಾರರಿಗೆ ಪ್ರಾಮುಖ್ಯತೆ ನೀಡುವುದಲ್ಲದೆ ಸೂಕ್ತ ಬಂಡವಾಳ ಉತ್ತೇಜನ ನೀಡಿ ಆಕರ್ಷಿಸಬೇಕಾಗಿರುತ್ತದೆ. ಈ ಪ್ರವಾಸೋದ್ಯಮ ನೀತಿಯಿಂದ 5 ವರ್ಷ ಅವಧಿಯಲ್ಲಿ ಸುಮಾರು ರೂ.27,000-00ಕೋಟಿಗಳವರೆಗೆ ಖಾಸಗಿ ಬಂಡವಾಳವನ್ನು ನಿರೀಕ್ಷಿಸಬಹುದಾಗಿದೆ. ಈ ಬಂಡವಾಳದಿಂದ ಅಂದಾಜು 30ಲಕ್ಷಗಳ ಹೆಚ್ಚುವರಿ ಉದ್ಯೋಗಗಳನ್ನು ಪ್ರವಾಸೋದ್ಯಮ ಕ್ಷೇತ್ರದಲ್ಲಿ 2015-20ರ ಅವಧಿಯಲ್ಲಿ ಸೃಷ್ಟಿಸಲು ನಿರೀಕ್ಷಿಸಲಾಗಿದೆ. ಈ ನೀತಿಯ ಅವಧಿಯಲ್ಲಿ ಸುಮಾರು ರೂ.2000.00 ಕೋಟಿಗಳ ವೆಚ್ಚದ ಯೋಜನೆಗಳು ಪ್ರವಾಸೋದ್ಯಮ ಇಲಾಖೆಯ ಮುಂದೆ ಮಂಡಿಸಬಹುದಾಗಿದ್ದು, ಸುಮಾರು ರೂ.250.00ಕೋಟಿಗಳ ಹೂಡಿಕೆ, ಸಹಾಯಧನಗಳನ್ನು ಪಾವತಿಸಬೇಕಾಗಿರುತ್ತದೆಂದು ನಿರೀಕ್ಷಿಸಲಾಗಿದೆ.

ಪ್ರವಾಸೋದ್ಯಮ ಕ್ಷೇತ್ರದಲ್ಲಿ ವಿವಿಧ ಹೂಡಿಕೆ, ಸೇವಾವರ್ಗಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರದಿಂದ ಪ್ರತ್ಯೇಕ ಮಾರ್ಗಸೂಚಿಗಳನ್ನು ಹೊರಡಿಸುವ ಅಗತ್ಯ ಇರುತ್ತದೆ. ಸದರಿ ಮಾರ್ಗಸೂಚಿಗಳನ್ನು ಅನುಸರಣೆ ಮಾಡುವ ಅರ್ಹರಿಗೆ ಬಂಡವಾಳ ಸಹಾಯಧನ ಮತ್ತು ರಿಯಾಯಿತಿಗಳನ್ನು ಹೊಂದುವುದು ಈ ನೀತಿಯಲ್ಲಿ ಅವಶ್ಯವಾಗಿರುತ್ತದೆ.

ಮೇಲಿನ ಅಂಶಗಳನ್ನು/ವಿವರಗಳನ್ನು ಪ್ರವಾಸೋದ್ಯಮ ನೀತಿಯಲ್ಲಿ ಅಳವಡಿಸಿ ಪ್ರವಾಸೋದ್ಯಮ ನೀತಿಯನ್ನು ಪ್ರಕಟಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಪ್ರಇ 81 ಪ್ರವಾಯೋ 2014 ಬೆಂಗಳೂರು ದಿನಾಂಕ 26-3-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಪ್ರವಾಸೋದ್ಯಮ ನೀತಿ 2015-20ನ್ನು ಈ ಅದೇಶದೊಂದಿಗೆ ಲಗತ್ತಿಸಿರುವ ಅನುಬಂಧದಂತೆ ರೂಪಿಸಿ ಸದರಿ ನೀತಿಯಲ್ಲಿ ಅಳವಡಿಸಲಾಗಿರುವ ರಿಯಾಯಿತಿ ಮತ್ತು ಉತ್ತೇಜಕಗಳೊಂದಿಗೆ ಜಾರಿಗೊಳಿಸಲು ಸರ್ಕಾರ ಅನುಮೋದನೆ ನೀಡಿದೆ. ಕೆಳಕಂಡ ತಿದ್ದುಪಡಿಯೊಂದಿಗೆ ಪ್ರವಾಸೋದ್ಯಮ ನೀತಿಯು ಈ ಆದೇಶ ಜಾರಿಗೆ ಬಂದ ದಿನಾಂಕದಿಂದ 5 ವರ್ಷಗಳ ಅವಧಿಗೆ ಜಾರಿಯಲ್ಲಿರುತ್ತದೆ.

1. ಬೃಹತ್ ಯೋಜನೆಗಳ ಮೇಲೆ ವಿಧಿಸಬಹುದಾದ ಮನರಂಜನೆ ತೆರಿಗೆಗೆ ಸಂಬಂಧಿಸಿದಂತೆ, ತೆರಿಗೆ ಮೊತ್ತವನ್ನು 5 ವರ್ಷಗಳ ಅವಧಿಗೆ ಇಲಾಖೆಯೇ ಮರುಪಾವತಿಸುತ್ತದೆ.
2. ಸಾಹಸ ಪ್ರವಾಸೋದ್ಯಮಕ್ಕಾಗಿ ಖರೀಸಿದಬಹುದಾದ ಉಪಕರಣಗಳ ಮೇಲೆ ನೀಡಲಾಗುವ ಹೂಡಿಕೆ ಸಹಾಯಧನವನ್ನು (Investment subsidy)ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಪಾರದರ್ಶಕ ಮಾರ್ಗಸೂಚಿಗಳನ್ನು ಹೊರಡಿಸಿದ ನಂತರ ಪರಿಗಣಿಸಲಾಗುವುದು.

ಅನುಬಂಧದಲ್ಲಿರುವ ಪ್ರವಾಸೋದ್ಯಮ ಯೋಜನೆಗಳ ಅಭಿವೃದ್ಧಿಗೆ ಪೂರಕವಾಗಿ ಪ್ರವಾಸೋದ್ಯಮ ಕ್ಷೇತ್ರದಲ್ಲಿನ ವಿವಿಧ ಹೂಡಿಕೆ, ಸೇವಾವರ್ಗಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರದಿಂದ ಪ್ರತ್ಯೇಕ ಮಾರ್ಗಸೂಚಿಗಳನ್ನು ಹೊರಡಿಸಲಾಗುವುದು.

ಪ್ರವಾಸೋದ್ಯಮ ನೀತಿಯನ್ವಯ ಲಭ್ಯವಾಗುವ ವಿವಿಧ ಉತ್ತೇಜಕ ಮತ್ತು ರಿಯಾಯಿತಿಗಳ ಕುರಿತು ಕೈಪಿಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ಪ್ರವಾಸೋದ್ಯಮ ನೀತಿ 2015-2020ರಲ್ಲಿ ಪ್ರವಾಸೋದ್ಯಮಕ್ಕೆ ಅನ್ವಯಿಸಿದ ಯೋಜನೆಗಳಿಗೆ ಸಂಬಂಧಿಸಿದಂತೆ ಇತರೆ ಇಲಾಖೆಗಳಿಂದ ನೀಡಲಾಗುವ ಸೌಲಭ್ಯ ಮತ್ತು ರಿಯಾಯಿತಿಗಳು ಹಾಗೂ ಮಾರ್ಗಸೂಚಿಗಳ ಕುರಿತು ಸಂಬಂಧಿಸಿದ ಇಲಾಖೆಗಳು ಪ್ರತ್ಯೇಕ ಆದೇಶಗಳನ್ನು ಹೊರಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ರವಿಮೂರ್ತಿ**

ಸರ್ಕಾರದ ಜಂಟಿ ಕಾರ್ಯದರ್ಶಿ

ಪ್ರವಾಸೋದ್ಯಮ ಇಲಾಖೆ

## PROCEEDINGS OF GOVERNMENT OF KARNATAKA

## TOURISM SECRETARIAT

**Sub:** Implementation of Karnataka Tourism Policy 2015-20 -reg.

**Read:** Government order No. Kasamvapra 231 Pravayo 2007 Dated 20-10-2009

**PREAMBLE:**

In the Government Order read above, Karnataka Tourism Policy 2009-14 was introduced. The period of the Policy ended on 19-10-2014.

The Tourism industry is considered as a priority sector of the economy and contributes significantly to the country's GDP as well as Foreign Exchange Earnings. The tourism and heritage industry have a significant influence on the socio-economic and cultural profile of the State. The tourism & heritage industry, directly or indirectly, provides livelihood opportunities to a considerable section of the population in the State. The people benefited include Hoteliers, Restaurateurs, Tourist Guides**,** Tour operators, Artisans, including weavers, dealers in antique/curiosity items and many more. Adopting a proper policy in the Tourism sector is expected in the next 10 years to:–

1. Generate 4.3 million additional employment possibilities
2. Generate revenue of Rs.85,000-00crores and

3. Additional investment of Rs.73,000-00crores of which about 50% being catalysed as investment from the private sector.

A well structured tourism policy has an important bearing on the development indices and brings more income to the Central and State exchequer. It is therefore imperative for the State Government to review their existing tourism policy periodically, on par with the National Tourism Policy and guidelines and in the backdrop of the Millennium Development Goals. Various States have revised their Tourism policies to attract Foreign investments and provide safe, comfortable and lasting experience to the tourists.

The existing tourism policy for Karnataka was formulated for the period 2009-2014. The said policy term ended on 19-10-2014. During the policy period 318 project proposals with a proposed total investment of about Rs. 950 crores were approved by the Department of Tourism. 126 projects were completed during the policy period and investment subsidies to the tune of Rs. 22 crores have been disbursed. Approximately 2500 direct employment opportunities were created through these projects.

The State Government has setup a Karnataka Tourism Vision Group (KTVG) with a mandate to provide a road map for making Karnataka a Tourist Experience destination on par with International Standards. KTVG in its report to the Government has made certain recommendations for the growth of tourism sector in Karnataka and the same have been considered in the preparation of the Karnataka tourism policy 2015-20.

The proposed tourism policy for 2015-20 aims to develop Karnataka into one of the top two tourism destinations in India and top fifty in the world. The vision articulated for the tourism sector is to develop Karnataka as a safe, sustainable and most favoured tourism destination by increasing domestic & international visitations; offering high quality experience to visitors; facilitating and accelerating investments; and improving livelihood opportunities at the local level.

To achieve the vision as set out in the policy, there is an emphasis on bringing in private investments into the sector by providing significant investment incentives**.** The proposed tourism policy envisages private investments to the tune of Rs.27,000 crores over the next 5 years in the tourism sector. This investment is expected to generate additional employment of approximately 30 lakhs in the tourism sector over the policy period, 2015-20. It is estimated that during the policy period projects worth Rs.2,000 crores would be put forth before the Department of Tourism, Government of Karnataka for investment subsidies. About Rs.250 crores is expected to be disbursed as investment subsidies during the policy period.

A separate guidelines by competent authority for development of tourism projects under various tourism products and service categories is required to be issued. Compliance with the guidelines would be necessary to be eligible for availing off concessions and investment subsidies under the policy.

Government has decided to include the above points/details and publish Tourism Policy. Hence the following order.

**GOVENRMENT ORDER NO. TD 81 TTT 2014 BANGALORE DATED 26-3-2015**

In the circumstances explained above, approval of Government is accorded for the Karnataka Tourism Policy 2015-20 as appended to this Order and to implement along with the concessions and incentives mentioned in the said policy . The Tourism Policy will be in force for a period of 5 years from the date of issue of this Order with the following ammendment.

a. As far as entertainment tax for mega projects is concerned, the quantum of entertainment tax will be reimbursed by the department for a period of 5 years.

b. Investment subsidy on adventure tourism equipment will be provided after a transparent policy guidelines are issued with the prior concurrence of the Finance Department.

Separate guidelines will be issued by the competent authority for development of tourism projects under various tourism products and service categories listed in the Annexure.

A Separate handbook on the various incentives and concession available under the policy will be issued seperately.

A separate guidelines/Orders/Notifications with regard to the concessions and facilities as mentioned in the Karnataka Tourism Policy 2015-2020 to be provided by concerned Departments in respect of Tourism projects shall be issued seperately by the respective Department.

BY ORDER AND IN THE NAME OF THE GOVERNOR OF KARNATAKA

**H.K. RAVIMURTHY**
Joint Secretary to Government
Tourism Department

**LIST OF DEVELOPMENT OF PROJECTS UNDER VARIOUS TOURISM PRODUCTS AND SERVICE CATEGORIES**

Tourism Infrastructure and Products include those Tourism Projects that involve land based development of tourism related infrastructure. For details on the eligibility criteria and development norms, the Guidelines for each of the products shall be made available on www.karnatakatourism.org.

| Project | Definition |
|---|---|
| **1. Hotels & Resorts** | **'Hotel'** is an establishment providing accommodation, meals, and other services for travellers and tourists, in tourist destinations of the state.<br>**'Resort'** shall include a hotel and is a place used for relaxation, recreation, attracting visitors for vacations and/or tourism.<br>The Hotels and Resorts shall provide accommodation facilities for tourists with atleast 20 rentable rooms with attached bathrooms. |
| **2. Caravan Parks** | **'Caravan Park'** is a facility developed for parking of Caravans in allotted spaces and includes other amenities. The caravan park would need to be developed in an area of atleast two acres and include atleast five parking bays. |
| **3. Museums & Galleries** | '**Museum'** is an institution that cares for or conserves a collection of artifacts and other objects of scientific, artistic, cultural, or historical importance and makes them available for tourists viewing through exhibits.<br>'**Galleries'** includes roofed premises in which paintings, sculptures and other art forms are exhibited for purposes of information dissemination/ sale and is accessible by the tourists.. |
| **4. Eco-Tourism Project** | **Eco-Tourism** is broadly defined as tourism which is ecologically sustainable. The concept of ecological sustainability subsumes the environmental carrying capacity of a given area. Eco-tourism projects shall be governed by the following principles:<br>The local community should be involved leading to the overall economic development of the area;<br>The likely conflicts between resource use for eco-tourism and the livelihood of local inhabitants should be identified and attempts made to minimize the same;<br>The type and scale of eco-tourism development should be compatible with the environment and socio-cultural characteristics of the local community, and;<br>It should be planned as a part of the overall area development strategy, guided by an integrated land-use plan avoiding inter-sectoral conflicts and ensuring sectoral integration, associated with commensurate expansion of public services;<br>The guidelines for eco-tourism are applicable to any protected areas, national parks, wildlife sanctuaries, community reserves; conservation reserves, sacred groves, or pilgrimage spots located within protected and/or forested areas. |
| **5. Rural Tourism Project** | **'Rural Tourism Project'** shall mean and include all of the following;<br>(a) tourism that showcases the rural life, art, culture, craft, cuisine and heritage of rural locations in the State;<br>(b) benefit the local community economically and socially;<br>(c) enables interaction between the tourists and the locals for a more enriching tourism experience and<br>(d) is essentially an activity which takes place in the countryside.<br>The Project shall provide self employment opportunities and shall have a training centre to impart training on local art and craft. The Project shall also have an information centre and a sales outlet providing the necessary backward and forward linkages. |
| **6. Agri Tourism** | **'Agri Tourism'** shall encourage active involvement in the activities of the farm or its operations. Agri Tourism must include setting up within a working farm or any agricultural, horticultural, or agribusiness operations for the purpose of tourists/ travellers visiting for leisure, education and must include:<br>(a) any one of the following components - horticulture orchard/garden/vineyard; fish pond; sericulture unit; apiculture unit; dairy farm; goat/piggery unit;<br>(b) any two or more of the following activities / components - farm camping, hands on farming, picking fruits/ vegetables, feeding animals, interactions with farmers on farming – process from sowing to reaping, etc. . |
| **7. Cruise Tourism** | '**Cruise Tourism'** is defined as leisure travel between tourist destinations along the coastline or major rivers in Karnataka on a ship/ cruise liner and also involves development of a cruise terminal; |
| **8. Adventure Tourism** | **'Adventure Tourism'** involves infrastructure and activities that provide the tourists with an opportunity to explore adventure and includes activities such as the following;<br>(a) Land based – mountaineering and trekking |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| Project | Definition |
|---|---|
| | (b) Water based – river running, kayaking, river rafting, scuba diving, snorkeling, water skiing, jet skiing, boat based fishing, surfing, sail boarding and wind surfing<br>(c) Air based – paragliding, parasailing and bungee jumping<br>***(Shall include guidelines for adventure tourism equipment)*** |
| **9. Entertainment Park** | **'Entertainment Park'** is an outdoor recreation park and shall mean either of the following - a theme park, an amusement park, a water park. An entertainment park offers relaxation and/ or recreation to visitors and includes amusement rides, games, entertainment options. |
| **10. Wayside Amenity** | **'Wayside Amenity'** is defined as a facility comprising resting areas, toilets, cafeteria, mini store/ pharmacy and an information / souvenir booth; located on National, State and District Highways; for the benefit of travelers/ tourists. |
| **11. Yatri Niwas** | **'Yatri Niwas'** is defined as a budget accommodation facility targeting families or group of individuals; located on National, State and District Highways; within a distance of atleast 10 km from an existing tourist destination and includes atleast<br>(a) ten rentable rooms with attached toilets,<br>(b) two dormitories with toilets(one each for men and women), each dormitory with atleast ten beds; and<br>(c) a cafeteria. |
| **12. Dormitories / Youth Hostel (YuvaVasatigraha)** | **'Youth Hostel'** is defined as a facility which provides budget/ inexpensive overnight lodging, particularly for budget tourists who are unable to afford expensive hotels. |
| **13. Wellness/ Holistic Health Centre** | **'Wellness/ Holistic Health Centre'** is defined as a facility that provides specialised therapy to tourists through alternate system of medicine such as AYUSH (Ayurveda, Yoga, Naturopathy, Unani, Siddha, and Homoeopathy) through professionally qualified personnel. |
| **14. Tourist Interpretation Centre** | **'Tourist Interpretation Centre'** is a facility for dissemination of knowledge of natural or cultural heritage to tourists; it provides a visitor an interpretation of the place of interest through a variety of media, such as video displays and exhibitions of material. |
| **15. Tourist Information Kiosk** | **'Tourist Information Kiosk'** is a kiosk located at a public place or at transit points such as bus station, railway station, airport, sea port, etc.; providing basic information to tourists; including but not limited to the following;<br>(a) Tourist maps of destinations<br>(b) Nearest basic amenity such as hotel, restaurant, bus stop, railway station, etc.<br>(c) Tourist destinations in the State<br>(d) Emergency contact numbers - police, fire, hospital, etc.<br>(e) Modes of transport and means to reach destinations |
| **16. Tourist Information Centre** | **'Tourist Information Centre'** is a facility located at a public place or at transit points such as bus station, railway station, airport, sea port, etc.; which in addition to providing basic information to tourists, also enables hassle free travel/ tour/ stay for tourists. It would provide services including but not limited to the following;<br>(a) Plan and customize tour/ travel/ stay in the city/ State based on tourist requirements<br>(b) Book accommodation in hotels/ home stays/ etc.<br>(c) Book travel through taxi/ bus/ train/ flight/ ferry, etc. |
| **17. Vocational Training Institutes (Training and HRD Infrastructure)** | Institutions established for providing training and skill development courses for tour guides, tour operators and in areas such as culinary skills, hotel management, tourism facility management |

**H.K. RAVIMURTHY**
Joint Secretary to Government
Tourism Department

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ- III | ಬೆಂಗಳೂರು, ಗುರುವಾರ, ಫೆಬ್ರವರಿ ೦೫, ೨೦೧೫ (ಮಾಘ ೧೬, ಶಕ ವರ್ಷ ೧೯೩೬) | ನಂ. ೧೩೬ |
|---|---|---|
| Part- III | Bangalore, Thursday, February 05, 2015 (Magha 16, Shaka Varsha 1936) | No. 136 |


**ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.**

[4(2) ನೇ ಪ್ರಕರಣವನ್ನು ನೋಡಿ]

**ಅಧಿಸೂಚನೆ**

**ಸಂಖ್ಯೆ ರಾಚು ಸಿಆರ್.26(1)/2014-15, ದಿನಾಂಕ : 4-2-2015**

ದಾವಣಗೆರೆ ಜಿಲ್ಲೆ **ದಾವಣಗೆರೆ ತಾಲ್ಲೂಕಿನಲ್ಲಿ** ಹೊಸ ಗ್ರಾಮ ಪಂಚಾಯತಿಗಳ ರಚನೆ ಹಾಗೂ ಕೆಲವು ಗ್ರಾಮಗಳನ್ನು ಒಂದು ಗ್ರಾಮ ಪಂಚಾಯತಿಯಿಂದ ಮತ್ತೊಂದು ಗ್ರಾಮ ಪಂಚಾಯತಿಗೆ ವರ್ಗಾಯಿಸುವ ಬಗ್ಗೆ 1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ (1993 ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 4(1) ರಲ್ಲಿ ಅಗತ್ಯ ಪಡಿಸಿದಂತೆ ಈ ಕಛೇರಿಯಿಂದ ಹೊರಡಿಸಲಾದ ಅಧಿಸೂಚನೆ ಸಂಖ್ಯೆ ರಾಚು ಸಿಆರ್.26/2014-15 ದಿನಾಂಕ 19-1-2015 ನ್ನು ದಿನಾಂಕ 20-1-2015 ರ ರಲ್ಲಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿ ಸದರಿ ಅಧಿಸೂಚನೆಗೆ ಬಾಧಿತರಾಗುವ ಸಂಭವವಿರುವ ವ್ಯಕ್ತಿಗಳಿಂದ ಹಾಗೂ ಸಾರ್ವಜನಿಕರಿಂದ ದಿನಾಂಕ 29-1-2015 ರೊಳಗೆ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿದ್ದರಿಂದ,

ಮತ್ತು ಸದರಿ ಕರಡು ಅಧಿಸೂಚನೆಗೆ ಸಂಬಂಧಿಸಿದಂತೆ ಸ್ವೀಕರಿಸಲಾದ ಆಕ್ಷೇಪಣೆಗಳನ್ನು ಅಥವಾ ಸಲಹೆಗಳನ್ನು ಪರಿಶೀಲಿಸಿರುವುದರಿಂದ,

ಈಗ 1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ (1993 ರ ಕರ್ನಾಟಕ ಅಧಿನಿಯಮ ಸಂಖ್ಯೆ 14) 4ನೇ ಪ್ರಕರಣದ 1ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ **ಎಸ್.ಟಿ. ಅಂಜನ್‌ಕುಮಾರ್, ಭಾ.ಆ.ಸೇ.,** ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ, ದಾವಣಗೆರೆ ಆದ ನಾನು ಕೋಷ್ಟಕದ 4ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದಂತೆ ಗ್ರಾಮ, ಗ್ರಾಮಗಳ ಸಮೂಹಗಳನ್ನೊಳಗೊಂಡ ಪ್ರದೇಶವು ಒಂದು ಗ್ರಾಮ ಪಂಚಾಯತಿಯಾಗಿರುತ್ತದೆ ಮತ್ತು 3ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿರುವಂತಹ ಸ್ಥಳವು ಅದರ ಕೇಂದ್ರ ಕಾರ್ಯಸ್ಥಾನವಾಗಿರುತ್ತದೆ ಎಂದು ಘೋಷಿಸುತ್ತೇನೆ.

**ಎಸ್.ಟಿ. ಅಂಜನ್‌ಕುಮಾರ್**

ಜಿಲ್ಲಾಧಿಕಾರಿ

ದಾವಣಗೆರೆ ಜಿಲ್ಲೆ

**ಕೋಷ್ಟಕ**

**ಗ್ರಾಮ ಪಂಚಾಯತಿಗಳು ಹಾಗೂ ಅದಕ್ಕೆ ಸೇರುವ ಗ್ರಾಮ, ಗ್ರಾಮಗಳ ಸಮೂಹದ ಕೋಷ್ಟಕ**

**ಜಿಲ್ಲೆ : ದಾವಣಗೆರೆ** **ತಾಲ್ಲೂಕು : ದಾವಣಗೆರೆ**

| ಕ್ರ.ಸ | ಗ್ರಾಮ ಪಂಚಾಯತಿ | ಕೇಂದ್ರಸ್ಥಾನ | ಗ್ರಾಮ, ಗ್ರಾಮಗಳ ಸಮೂಹ |
|---|---|---|---|
| 1 | **ಹಳೇಬಾತಿ (ಹೊಸ ಗ್ರಾಮ ಪಂಚಾಯತಿ)** | **ಹಳೇಬಾತಿ** | ಹಳೇಬಾತಿ, ಗುಡ್ಡದ ಕ್ಯಾಂಪ್, ಅಗಸನಕಟ್ಟೆ (ಬೆ) |
| | | | ನೀಲಾನಹಳ್ಳಿ |
| 2 | ಶ್ರೀರಾಮನಗರ **(ಹೊಸ ಗ್ರಾಮ ಪಂಚಾಯತಿ)** | ಶ್ರೀರಾಮನಗರ | ಶ್ರೀರಾಮನಗರ, ಅಕ್ಕಾಸಾಲಿದ್ಯಾಮಜ್ಜಿಹಳ್ಳಿ (ಬೇ) |

| | | | |
|---|---|---|---|
| 3 | ದೊಡ್ಡಬಾತಿ | ದೊಡ್ಡಬಾತಿ | ದೊಡ್ಡಬಾತಿ |
| 4 | ಆಲೂರು | ಆಲೂರು | ಆಲೂರು |
| | | | ಮಲ್ಲಾಪುರ |
| 5 | ಅಣಜಿ | ಅಣಜಿ | ಅಣಜಿ, ಗಿರಿಯಾಪುರ, ಗಾಂಧಿನಗರ |
| | | | ಮೆಳ್ಳೆಕಟ್ಟೆ |
| | | | ಗೊಲ್ಲರಹಳ್ಳಿ |
| 6 | ಐಗೂರು | ಐಗೂರು | ಐಗೂರು |
| | | | ಶ್ರೀಕೃಷ್ಣನಗರ |
| | | | ತುಂಬಿಗೆರೆ |
| | | | ಲಿಂಗಾಪುರ |
| | | | ಬೋರಗೊಂಡನಹಳ್ಳಿ |
| | | | ಅಗಸನಕಟ್ಟೆ |

**ಎಸ್.ಟಿ. ಅಂಜನ್‌ಕುಮಾರ್**
ಜಿಲ್ಲಾಧಿಕಾರಿ
ದಾವಣಗೆರೆ ಜಿಲ್ಲೆ


# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಗುರುವಾರ, ಫೆಬ್ರವರಿ ೦೫, ೨೦೧೫ (ಮಾಘ ೧೬, ಶಕ ವರ್ಷ ೧೯೩೬) | ನಂ. ೧೩೮ |
|---|---|---|
| **Part– III** | **Bangalore, Thursday, February 05, 2015 (Magha 16, Shaka Varsha 1936)** | **No. 138** |


## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

### ಅಂತಿಮ ಅಧಿಸೂಚನೆ

**(ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 4ರಡಿ)**

**ಸಂಖ್ಯೆ: ಇ.ಎಲ್.ಎನ್.(2) / ಸಿ.ಆರ್. 78 // 2014–15, ದಿನಾಂಕ: 04 / 02 / 2015**

ಗ್ರಾಮಪಂಚಾಯತಿಗಳ ಪುನರ್ ವಿಂಗಡಣಾ ಸಮಿತಿಯು ಸಾರ್ವಜನಿಕರ ಮನವಿ ಹಾಗೂ ಸಂಬಂಧಿಸಿದ ಜನಪ್ರತಿನಿಧಿಗಳ ಕೋರಿಕೆಯನ್ನಾಧರಿಸಿ, ಹೊಸ ಗ್ರಾಮಪಂಚಾಯತಿಗಳನ್ನು ಸೃಜಿಸಲು ಹಾಗೂ ಹಲವಾರು ಗ್ರಾಮಗಳನ್ನು ಒಂದು ಗ್ರಾಮಪಂಚಾಯಿತಿಯಿಂದ ಮತ್ತೊಂದು ಗ್ರಾಮಪಂಚಾಯತಿ ವ್ಯಾಪ್ತಿಗೆ ವರ್ಗಾಯಿಸುವ ಶಿಫಾರಸ್ಸುಗಳನ್ನು ಸರ್ಕಾರವು ಪರಿಶೀಲಿಸಿದ ವರದಿಯನ್ನು ಉಲ್ಲೇಖ (2)ರ ಅಧಿಸೂಚನೆಯಲ್ಲಿ ಸಾರ್ವಜನಿಕರ ಗಮನಕ್ಕೆ ಆಕ್ಷೇಪಣೆ/ಸಲಹೆಗಳನ್ನು ಸಲ್ಲಿಸುವ ಸಲುವಾಗಿ ಪ್ರಚುರ ಪಡಿಸಲಾಗಿರುತ್ತದೆ. ಈ ರೀತಿಯಾಗಿ ಪ್ರಚುರ ಪಡಿಸಲಾದ ವರದಿಗೆ ಸಂಬಂಧಿಸಿದಂತೆ ಸಾರ್ವಜನಿಕರಿಂದ ಮತ್ತು ಜನಪ್ರತಿನಿಧಿಗಳಿಂದ ಕೆಲವು ಆಕ್ಷೇಪಣೆಗಳು ಮತ್ತು ಸಲಹೆಗಳು ಸ್ವೀಕೃತಗೊಂಡಿದ್ದು ಇದನ್ನು ಪರಿಶೀಲಿಸಿ ವರದಿ ಸಲ್ಲಿಸಲು ಪ್ರತಿ ತಾಲ್ಲೂಕಿನಲ್ಲಿ ಒಂದು ಸಮಿತಿಯನ್ನು ರಚಿಸಲಾಗಿ, ಸದರಿ ಸಮಿತಿಯು ಸಲ್ಲಿಸಿದ ವರದಿಯನ್ವಯ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ 06 ಗ್ರಾಮಪಂಚಾಯತಿಗಳನ್ನು ಹೊಸದಾಗಿ ರಚಿಸಲು ಹಾಗೂ ಕೆಲವು ಗ್ರಾಮಗಳನ್ನು ಒಂದು ಗ್ರಾಮಪಂಚಾಯತಿಯಿಂದ ಮತ್ತೊಂದು ಗ್ರಾಮಪಂಚಾಯತಿ ವ್ಯಾಪ್ತಿಗೆ ವರ್ಗಾಯಿಸಲು ಉದ್ದೇಶಿಸಿದೆ.

**ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ (4)ರ ಮೇರೆಗೆ ಚಿಕ್ಕಬಳ್ಳಾಪುರ ತಾಲ್ಲೂಕಿಗೆ ಸಂಬಂಧಿಸಿದಂತೆ ಕೆಳಕಂಡ ಪಟ್ಟಿಯಲ್ಲಿ ಸಾರ್ವಜನಿಕರ ಮಾಹಿತಿಗಾಗಿ ಬದಲಾವಣೆ/ ಸೇರ್ಪಡೆ/ ವರ್ಗಾವಣೆಯಾದ ಗ್ರಾಮಪಂಚಾಯತಿಗಳನ್ನು ಮಾತ್ರ ನಮೂದಿಸಲಾಗಿದೆ. ಸದರಿ ಪಟ್ಟಿಯಲ್ಲಿ ದಾಖಲಾಗದ/ ನಮೂದಾಗದ ಗ್ರಾಮಪಂಚಾಯತಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ತಾಲ್ಲೂಕಿನ ಹೆಸರು : ಚಿಕ್ಕಬಳ್ಳಾಪುರ**

<u>ಬದಲಾವಣೆಯಾದ ಗ್ರಾಮಪಂಚಾಯತಿಗಳ ವಿವರ</u>

| ಕ್ರ. ಸಂ | ಗ್ರಾಮ ಪಂಚಾಯಿತಿ ಹೆಸರು | ಗ್ರಾಮದ ಹೆಸರು | 2011ರ ಜನಸಂಖ್ಯೆ | ಷರಾ |
|---|---|---|---|---|
| | 4–ಅರೂರು | ಅರೂರು,<br>ಅವಲನಾಗೇನಹಳ್ಳಿ,(ಮ)<br>ತುಮಕಲಹಳ್ಳಿ,(ಮ)<br>ಬಸವನಪರ್ತಿ,(ಮ)<br>ಚಿಕ್ಕ ಅರೂರು (ಮ) | 2098 | ಅರೂರು ಗ್ರಾಮ ಪಂಚಾಯಿತಿಯಲ್ಲಿನ ಬಂಡಹಳ್ಳಿ, ಭೋಗಪರ್ತಿ, ಬಿಸೈಗಾರಹಳ್ಳಿ ಮತ್ತು ಶೆಟ್ಟಿಗೆರೆ ನಾಲ್ಕು ಗ್ರಾಮಗಳನ್ನು ಹೊಸದಾಗಿ ರಚಿತವಾದ ಶೆಟ್ಟಿಗೆರೆ ಗ್ರಾಮ ಪಂಚಾಯಿತಿಗೆ ವರ್ಗಾಯಿಸಿದೆ. |

| ಕ್ರ. ಸಂ | ಗ್ರಾಮ ಪಂಚಾಯಿತಿ ಹೆಸರು | ಗ್ರಾಮದ ಹೆಸರು | 2011ರ ಜನಸಂಖ್ಯೆ | ಷರಾ |
|---|---|---|---|---|
| | | ಚಿಕ್ಕನಾಗವಲ್ಲಿ | 383 | |
| | | ಹನುಮಂತಪುರ | 158 | |
| | | ಜೊನ್ನಲಕುಂಟೆ | 41 | |
| | | ಕಾಕಲಚಿಂತೆ, ಆದ್ಯೆಗಾರಹಳ್ಳಿ (ಮ) ಮುತ್ತಕದಹಳಿ (ಮ) ಕಮ್ಮಗಾನಹಳಿ, (ಮ) ಕೆ.ಇ.ಬಿ ಕಾಲೋನಿ(ಮ) | 1472 | |
| | | ನಂದನಾಗೇನಹಳ್ಳಿ, ಬುಶೆಟ್ಟಿಹಳ್ಳಿ (ಮ) ಆದೆನ್ನಗಾರಹಳ್ಳಿ (ಮ) ದೊಂಬರಗುಡಿಸಲು(ಮ) | 986 | |
| | | **ಒಟ್ಟು** | **5138** | |
| 2. | 1–ಮಂಡಿಕಲ್ | ಮಂಡಿಕಲ್, ಯಾಟಗಾನಹಳ್ಳಿ(ಮ) | 1652 | ಅರೂರು ಗ್ರಾಮ ಪಂಚಾಯಿತಿಯಲ್ಲಿನ ಬಂಡಹಳ್ಳಿ, ಭೋಗಪರ್ತಿ, ಬಿಸೈಗಾರಹಳ್ಳಿ ಮತ್ತು ಶೆಟ್ಟಿಗೆರೆ ನಾಲ್ಕು ಗ್ರಾಮಗಳನ್ನು ಹೊಸದಾಗಿ ರಚಿತವಾದ ಶೆಟ್ಟಿಗೆರೆ ಗ್ರಾಮ ಪಂಚಾಯಿತಿಗೆ ವರ್ಗಾಯಿಸಿದೆ. |
| | | ಬಚ್ಚೇನಹಳ್ಳಿ | 452 | |
| | | ದರಬೂರು | 704 | |
| | | ಗುಡಿಸಿಹಳ್ಳಿ, ನೆಲಮಾನಪರ್ತಿ (ಮ), ಜೀಡಮಾಕಲಹಳ್ಳಿ (ಮ) | 383 | |
| | | ಗುಂಡ್ಲುಮಂಡಿಕಲ್ಲು, ಮಣಿಪುರ(ಮ) | 991 | |
| | | ಹೊಸಹಳ್ಳಿ | 234 | |
| | | ಪಾರೇನಹಳ್ಳಿ, ಪೈಯೂರು(ಮ) | 476 | |
| | | ಯದಾರ್ಲಹಳ್ಳಿ, ಪಾಪೇನಹಳ್ಳಿ (ಮ) | 118 | |
| | | ಯರ್ರಬಾಪನಹಳ್ಳಿ | 235 | |
| | | **ಒಟ್ಟು** | **5245** | |

**<u>ನೂತನ ಗ್ರಾಮ ಪಂಚಾಯತಿಗಳ ವಿವರ</u>**

| ಕ್ರ. ಸಂ. | ಗ್ರಾಮ ಪಂಚಾಯಿತಿ ಹೆಸರು | ಗ್ರಾಮದ ಹೆಸರು | 2011ರ ಜನಸಂಖ್ಯೆ | ಯಾವ ಗ್ರಾಮ ಪಂಚಾಯಿತಿಯಿಂದ ವರ್ಗಾವಣೆಯಾಗಿದೆ |
|---|---|---|---|---|
| 1) | 23–ಶೆಟ್ಟಿಗೆರೆ | ಶೆಟ್ಟಿಗೆರೆ, ಪಿಲ್ಲಗುಂಡ್ಲಹಳ್ಳಿ (ಮ) | 894 | 4–ಅರೂರು |
| | | ಭೋಗಪರ್ತಿ | 372 | |
| | | ಬಿಸೈಗಾರಹಳ್ಳಿ | 142 | |
| | | ಬಂಡಹಳ್ಳಿ | 320 | |
| | | ಅಡ್ಡಗಲ್ಲು, ಪಾತೂರು(ಮ) | 632 | 1–ಮಂಡಿಕಲ್ |

| ಕ್ರ. ಸಂ. | ಗ್ರಾಮ ಪಂಚಾಯಿತಿ ಹೆಸರು | ಗ್ರಾಮದ ಹೆಸರು | 2011ರ ಜನಸಂಖ್ಯೆ | ಯಾವ ಗ್ರಾಮ ಪಂಚಾಯಿತಿಯಿಂದ ವರ್ಗಾವಣೆಯಾಗಿದೆ |
|---|---|---|---|---|
| | | ದೊಡ್ಡಿಹಳ್ಳಿ | 91 | |
| | | ಕಾಚಕಡತ, ಚೆನ್ನಹಳ್ಳಿ (ಮ) | 385 | |
| | | ನಲ್ಲಪ್ಪನಹಳ್ಳಿ, ಕೆರೇನಹಳ್ಳಿ (ಮ), ಗೊರಮಿಳ್ಳಹಳ್ಳಿ (ಮ) | 447 | |
| | | **ಒಟ್ಟು** | **3283** | |

ಮೇಲ್ಕಂಡ ಗ್ರಾಮಪಂಚಾಯತಿಗಳ ಪುನರ್‌ವಿಂಗಡಣೆ / ಬದಲಾವಣೆ ಬಗ್ಗೆ ಸಾರ್ವಜನಿಕರು ಸಲಹೆ ಮತ್ತು ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ದಿನಾಂಕ 05/03/2015 ರೊಳಗಾಗಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ರವರಿಗೆ ಮೇಲ್ಮನವಿ ಸಲ್ಲಿಸಬಹುದಾಗಿರುತ್ತದೆ.

**ಡಾ॥ ಎಂ.ವಿ. ವೆಂಕಟೇಶ್, ಭಾ.ಆ.ಸೇ**

ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು,

ಚಿಕ್ಕಬಳ್ಳಾಪುರ ಜಿಲ್ಲೆ.

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| **ಭಾಗ– III** | **ಬೆಂಗಳೂರು, ಗುರುವಾರ, ಫೆಬ್ರವರಿ ೦೫, ೨೦೧೫ (ಮಾಘ ೧೬, ಶಕ ವರ್ಷ ೧೯೩೬)** | **ನಂ. ೧೪೫** |
| **Part– III** | **Bangalore, Thursday, February 05, 2015 (Magha 16, Shaka Varsha 1936)** | **No. 145** |

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ರಾಮನಗರ ಜಿಲ್ಲೆ, ರಾಮನಗರ**

**ಅಧಿಸೂಚನೆ**

**ಸಂಖ್ಯೆ: ರಾಜಿಕಾ/ಚುನಾವಣೆ(ಗ್ರಾ.ಪಂ)ಸಿಆರ್ 119/2014-15, ದಿನಾಂಕ 04-02-2015**

1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ಪ್ರಕರಣ 4(2) ಮತ್ತು ಸರ್ಕಾರದ ಕಾರ್ಯದರ್ಶಿ (ಪಂಚಾಯತ್ ರಾಜ್) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ರವರ ಪತ್ರದ ಸಂ: ಗ್ರಾಅಪ 10 ಗ್ರಾಪಂಅ 2015, ದಿನಾಂಕ: 09-01-2015 ರ ನಿರ್ದೇಶನದಂತೆ ಈ ಕಾರ್ಯಾಲಯದಿಂದ ದಿನಾಂಕ: 19-01-2015 ರಂದು ಪ್ರಥಮ ಅಧಿಸೂಚನೆ ಹೊರಡಿಸಿ, ರಾಮನಗರ ಜಿಲ್ಲೆ, ಚನ್ನಪಟ್ಟಣ ತಾಲ್ಲೂಕಿನ ಬಾಣಗಹಳ್ಳಿ ಗ್ರಾಮ ಪಂಚಾಯಿತಿ ಪ್ರದೇಶದ ವ್ಯಾಪ್ತಿಯ ಹುಣಸನಹಳ್ಳಿ (ಹುಚ್ಚಯ್ಯನದೊಡ್ಡಿ) ಗ್ರಾಮವನ್ನು ವರ್ಗಾಯಿಸಿ ಕೋಡಂಬಳ್ಳಿ ಗ್ರಾಮ ಪಂಚಾಯಿತಿ ಪ್ರದೇಶಕ್ಕೆ ಸೇರಿಸುವ ಪ್ರಯುಕ್ತ ಹಕ್ಕು ಮತ್ತು ಆಕ್ಷೇಪಣೆಗಳನ್ನು ನೀಡಲು ದಿನಾಂಕ: 29-01-2015 ರಂದು ಅಂತಿಮ ದಿನಾಂಕವನ್ನು ನಿಗಧಿಪಡಿಸಲಾಗಿದ್ದು, ನಿಗಧಿತ ಅವಧಿಯಲ್ಲಿ ಸಂಬಂಧಪಟ್ಟ ಗ್ರಾಮದ ಗ್ರಾಮಸ್ಥರಿಂದ ಹಕ್ಕು ಮತ್ತು ಆಕ್ಷೇಪಣೆಗಳು ಸ್ವೀಕೃತವಾಗಿದ್ದು, ಸದರಿ ಹಕ್ಕು ಮತ್ತು ಆಕ್ಷೇಪಣೆಗಳನ್ನು ಪರಿಶೀಲಿಸಲಾಗಿ ಚನ್ನಪಟ್ಟಣ ತಾಲ್ಲೂಕಿನ ಬಾಣಗಹಳ್ಳಿ ಗ್ರಾಮ ಪಂಚಾಯಿತಿ ಪ್ರದೇಶದ ವ್ಯಾಪ್ತಿಯ ಹುಣಸನಹಳ್ಳಿ (ಹುಚ್ಚಯ್ಯನದೊಡ್ಡಿ) ಗ್ರಾಮವನ್ನು ಕೋಡಂಬಳ್ಳಿ ಗ್ರಾಮ ಪಂಚಾಯಿತಿಯಲ್ಲಿಯೇ ಮುಂದುವರೆಸುವಂತೆ ಗ್ರಾಮಸ್ಥರು ಸಕರಾತ್ಮಕ ಅಭಿಪ್ರಾಯವನ್ನು ವ್ಯಕ್ತಪಡಿಸಿರುವ ಹಿನ್ನೆಲೆಯಲ್ಲಿ ರಾಮನಗರ ಜಿಲ್ಲಾ ಜಿಲ್ಲಾಧಿಕಾರಿ ಆದ **ಕೆ.ಎಸ್. ಮಂಜುನಾಥ್, ಭಾಆಸೇ.,** ಎಂಬ ಹೆಸರಿನ ನಾನು, ನನಗೆ ಪ್ರದತ್ತವಾದ ಅಧಿಕಾರಿವನ್ನು ಚಲಾಯಿಸಿ ಈ ಕೆಳಕಂಡಂತೆ ಕೋಷ್ಟಕ (1) ಹಾಗೂ ಕೋಷ್ಟಕ (2) ರಲ್ಲಿ ವಿವರಿಸಿ ಅಂತಿಮ ಅಧಿಸೂಚನೆ ಹೊರಡಿಸಿರುತ್ತೇನೆ.

**ಕೋಷ್ಟಕ (1)**

| ಹಾಲಿ ಇರುವ ಗ್ರಾಮ ಪಂಚಾಯಿತಿ ಹಾಗೂ ಕ್ಷೇತ್ರದ ವಿವರ | | |
|---|---|---|
| **ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು** | **ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು** | **ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿ** |
| ಬಾಣಗಹಳ್ಳಿ | ಹುಣಸನಹಳ್ಳಿ | ಹುಣಸನಹಳ್ಳಿ<br>ಹುಚ್ಚಯ್ಯನದೊಡ್ಡಿ |

**ಕೋಷ್ಟಕ (2)**

| ದಿನಾಂಕ 19-01-2015 ರ ಅಧಿಸೂಚನೆಯಂತೆ ದಿನಾಂಕ : 29-01-2015 ರ ಅವಧಿಯೊಳಗೆ ಸ್ವೀಕೃತವಾದ ಹಕ್ಕು ಮತ್ತು ಆಕ್ಷೇಪಣೆಗಳ ಪರಿಶೀಲನೆ ನಂತರ ಗ್ರಾಮಸ್ಥರ ಅಭಿಪ್ರಾಯದಂತೆ ಪರಿವರ್ತಿಸಿರುವ ಗ್ರಾಮ ಪಂಚಾಯ್ತಿ/ಗ್ರಾಮಪಂಚಾಯ್ತಿ ಕ್ಷೇತ್ರದ ವಿವರ | | |
|---|---|---|
| **ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು** | **ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು** | **ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿ** |
| ಕೋಡಂಬಳ್ಳಿ | ಹುಣಸನಹಳ್ಳಿ | ಹುಣಸನಹಳ್ಳಿ<br>ಹುಚ್ಚಯ್ಯನದೊಡ್ಡಿ |

**ಷರಾ:** ಅಂತಿಮ ಅಧಿಸೂಚನೆಯಿಂದ ಬಾಧಿತರಾದ ಗ್ರಾಮಸ್ಥರು/ಸಾರ್ವಜನಿಕರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 4(3) ರನ್ವಯ ಮಾನ್ಯ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರಿಗೆ ಮೇಲ್ಮನವಿ ಸಲ್ಲಿಸಿಕೊಳ್ಳಬಹುದು.

**ಕೆ.ಎಸ್. ಮಂಜುನಾಥ್, ಭಾಆಸೇ.,**

ಜಿಲ್ಲಾಧಿಕಾರಿಗಳು (ಪ್ರ)

ರಾಮನಗರ ಜಿಲ್ಲೆ, ರಾಮನಗರ



# ವಿಶೇಷ ರಾಜ್ಯ ಪತ್ರಿಕೆ

| ಭಾಗ– III | ಬೆಂಗಳೂರು, ಗುರುವಾರ, ಫೆಬ್ರವರಿ ೦೫, ೨೦೧೫ (ಮಾಘ ೧೬, ಶಕ ವರ್ಷ ೧೯೩೬) | ನಂ. ೧೪೭ |
|---|---|---|
| **Part– III** | **Bangalore, Thursday, February 05, 2015 (Magha 16, Shaka Varsha 1936)** | **No. 147** |


**ಜಿಲ್ಲಾಧಿಕಾರಿಗಳ ಕಾರ್ಯಾಲಯ, ರಾಮನಗರ ಜಿಲ್ಲೆ, ರಾಮನಗರ**

**ಅಧಿಸೂಚನೆ**

**ಸಂಖ್ಯೆ: ರಾಜಿಕಾ/ಚುನಾವಣೆ(ಗ್ರಾ.ಪಂ)ಸಿಆರ್ 119/2014-15, ದಿನಾಂಕ 04-02-2015**

1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ಪ್ರಕರಣ 4(2) ಮತ್ತು ಸರ್ಕಾರದ ಕಾರ್ಯದರ್ಶಿ (ಪಂಚಾಯತ್ ರಾಜ್) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ರವರ ಪತ್ರದ ಸಂ: ಗ್ರಾಅಪ 10 ಗ್ರಾಪಂಅ 2015, ದಿನಾಂಕ: 09-01-2015 ರ ನಿರ್ದೇಶನದಂತೆ ಈ ಕಾರ್ಯಾಲಯದಿಂದ ದಿನಾಂಕ: 19-01-2015 ರಂದು ಪ್ರಥಮ ಅಧಿಸೂಚನೆ ಹೊರಡಿಸಿ, ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕಿನ ಮುಳ್ಳಹಳ್ಳಿ ಗ್ರಾಮ ಪಂಚಾಯಿತಿ ಪ್ರದೇಶದ ವ್ಯಾಪ್ತಿಯ ಕೂತಗಳೆ ಗ್ರಾಮವನ್ನು ವರ್ಗಾಯಿಸಿ ಕೋಡಿಹಳ್ಳಿ ಗ್ರಾಮ ಪಂಚಾಯಿತಿ ಪ್ರದೇಶಕ್ಕೆ ಸೇರಿಸುವ ಪ್ರಯುಕ್ತ ಹಕ್ಕು ಮತ್ತು ಆಕ್ಷೇಪಣೆಗಳನ್ನು ನೀಡಲು ದಿನಾಂಕ: 29-01-2015 ರಂದು ಅಂತಿಮ ದಿನಾಂಕವನ್ನು ನಿಗದಿಪಡಿಸಲಾಗಿದ್ದು, ನಿಗಧಿತ ಅವಧಿಯಲ್ಲಿ ಸಂಬಂಧಪಟ್ಟ ಗ್ರಾಮದ ಗ್ರಾಮಸ್ಥರಿಂದ ಹಕ್ಕು ಮತ್ತು ಆಕ್ಷೇಪಣೆಗಳು ಸ್ವೀಕೃತವಾಗಿದ್ದು, ಸದರಿ ಹಕ್ಕು ಮತ್ತು ಆಕ್ಷೇಪಣೆಗಳನ್ನು ಪರಿಶೀಲಿಸಲಾಗಿ ಕನಕಪುರ ತಾಲ್ಲೂಕಿನ ಮುಳ್ಳಹಳ್ಳಿ ಗ್ರಾಮ ಪಂಚಾಯಿತಿ ಪ್ರದೇಶದ ವ್ಯಾಪ್ತಿಯ ಕೂತಗಳೆ ಗ್ರಾಮವನ್ನು ಮುಳ್ಳಹಳ್ಳಿ ಗ್ರಾಮ ಪಂಚಾಯಿತಿಯಲ್ಲಿಯೇ ಮುಂದುವರೆಸುವಂತೆ ಗ್ರಾಮಸ್ಥರು ಸಕರಾತ್ಮಕ ಅಭಿಪ್ರಾಯವನ್ನು ವ್ಯಕ್ತಪಡಿಸಿರುವ ಹಿನ್ನೆಲೆಯಲ್ಲಿ ರಾಮನಗರ ಜಿಲ್ಲಾ ಜಿಲ್ಲಾಧಿಕಾರಿ ಆದ **ಕೆ.ಎಸ್. ಮಂಜುನಾಥ್, ಭಾಆಸೇ.,** ಎಂಬ ಹೆಸರಿನ ನಾನು, ನನಗೆ ಪ್ರದತ್ತವಾದ ಅಧಿಕಾರಿವನ್ನು ಚಲಾಯಿಸಿ ಈ ಕೆಳಕಂಡಂತೆ ಕೋಷ್ಟಕ (1) ಹಾಗೂ ಕೋಷ್ಟಕ (2) ರಲ್ಲಿ ವಿವರಿಸಿ ಅಂತಿಮ ಅಧಿಸೂಚನೆ ಹೊರಡಿಸಿರುತ್ತೇನೆ.

**ಕೋಷ್ಟಕ (1)**

| ಹಾಲಿ ಇರುವ ಗ್ರಾಮ ಪಂಚಾಯಿತಿ ಹಾಗೂ ಕ್ಷೇತ್ರದ ವಿವರ | | |
|---|---|---|
| **ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು** | **ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು** | **ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿ** |
| ಮುಳ್ಳಹಳ್ಳಿ | ಕೂತಗಳೆ | ಕೂತಗಳೆ |

**ಕೋಷ್ಟಕ (2)**

| ದಿನಾಂಕ 19-01-2015 ರ ಅಧಿಸೂಚನೆಯಂತೆ ದಿನಾಂಕ : 29-01-2015 ರ ಅವಧಿಯೊಳಗೆ ಸ್ವೀಕೃತವಾದ ಹಕ್ಕು ಮತ್ತು ಆಕ್ಷೇಪಣೆಗಳ ಪರಿಶೀಲನೆ ನಂತರ ಗ್ರಾಮಸ್ಥರ ಅಭಿಪ್ರಾಯದಂತೆ ಮುಂದುವರಿಸಲಾದ ಗ್ರಾಮ ಪಂಚಾಯ್ತಿ/ಗ್ರಾಮ ಪಂಚಾಯ್ತಿ ಕ್ಷೇತ್ರದ ವಿವರ | | |
|---|---|---|
| **ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು** | **ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು** | **ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿ** |
| ಮುಳ್ಳಹಳ್ಳಿ | ಕೂತಗಳೆ | ಕೂತಗಳೆ |

**ಷರಾ:** ಅಂತಿಮ ಅಧಿಸೂಚನೆಯಿಂದ ಬಾಧಿತರಾದ ಗ್ರಾಮಸ್ಥರು/ಸಾರ್ವಜನಿಕರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 4(3) ರನ್ವಯ ಮಾನ್ಯ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರಿಗೆ ಮೇಲ್ಮನವಿ ಸಲ್ಲಿಸಿಕೊಳ್ಳಬಹುದು.

**ಕೆ.ಎಸ್. ಮಂಜುನಾಥ್, ಭಾಆಸೇ.,**
ಜಿಲ್ಲಾಧಿಕಾರಿಗಳು (ಪ್ರ)
ರಾಮನಗರ ಜಿಲ್ಲೆ, ರಾಮನಗರ.

# ವಿಶೇಷ ರಾಜ್ಯ ಪತ್ರಿಕೆ

| ಭಾಗ- III<br>Part- III | ಬೆಂಗಳೂರು, ಗುರುವಾರ, ಫೆಬ್ರವರಿ ೦೫, ೨೦೧೫ (ಮಾಘ ೧೬, ಶಕ ವರ್ಷ ೧೯೩೬)<br>Bangalore, Thursday, February 05, 2015 (Magha 16, Shaka Varsha 1936) | ನಂ. ೧೪೯<br>No. 149 |
|---|---|---|

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ರಾಮನಗರ ಜಿಲ್ಲೆ, ರಾಮನಗರ

### ಅಧಿಸೂಚನೆ

**ಸಂಖ್ಯೆ: ರಾಜಿಕಾ/ಚುನಾವಣೆ(ಗ್ರಾ.ಪಂ)ಸಿಆರ್ 119/2014-15, ದಿನಾಂಕ 04-02-2015**

1993ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ಪ್ರಕರಣ 4(2) ಮತ್ತು ಸರ್ಕಾರದ ಕಾರ್ಯದರ್ಶಿ (ಪಂಚಾಯತ್ ರಾಜ್) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ರವರ ಪತ್ರದ ಸಂ: ಗ್ರಾಅಪ 10 ಗ್ರಾಪಂಅ 2015, ದಿನಾಂಕ: 09-01-2015 ರ ನಿರ್ದೇಶನದಂತೆ ಈ ಕಾರ್ಯಾಲಯದಿಂದ ದಿನಾಂಕ: 19-01-2015 ರಂದು ಪ್ರಥಮ ಅಧಿಸೂಚನೆ ಹೊರಡಿಸಿ, ರಾಮನಗರ ಜಿಲ್ಲೆ, ಚನ್ನಪಟ್ಟಣ ತಾಲ್ಲೂಕಿನ ನೀಲಸಂದ್ರ ಗ್ರಾಮ ಪಂಚಾಯಿತಿ ಪ್ರದೇಶದ ವ್ಯಾಪ್ತಿಯ ಮಲ್ಲಿಂಗೆರೆ ಗ್ರಾಮವನ್ನು ವರ್ಗಾಯಿಸಿ ತಗಚಗೆರೆ ಗ್ರಾಮ ಪಂಚಾಯಿತಿ ಪ್ರದೇಶಕ್ಕೆ ಸೇರಿಸುವ ಪ್ರಯುಕ್ತ ಹಕ್ಕು ಮತ್ತು ಆಕ್ಷೇಪಣೆಗಳನ್ನು ನೀಡಲು ದಿನಾಂಕ: 29-01-2015 ರಂದು ಅಂತಿಮ ದಿನಾಂಕವನ್ನು ನಿಗಧಿಪಡಿಸಲಾಗಿದ್ದು, ನಿಗಧಿತ ಅವಧಿಯಲ್ಲಿ ಸಂಬಂಧಪಟ್ಟ ಗ್ರಾಮದ ಗ್ರಾಮಸ್ಥರಿಂದ ಹಕ್ಕು ಮತ್ತು ಆಕ್ಷೇಪಣೆಗಳು ಸ್ವೀಕೃತವಾಗಿದ್ದು, ಸದರಿ ಹಕ್ಕು ಮತ್ತು ಆಕ್ಷೇಪಣೆಗಳನ್ನು ಪರಿಶೀಲಿಸಲಾಗಿ ಚನ್ನಪಟ್ಟಣ ತಾಲ್ಲೂಕಿನ ನೀಲಸಂದ್ರ ಗ್ರಾಮ ಪಂಚಾಯಿತಿ ಪ್ರದೇಶದ ವ್ಯಾಪ್ತಿಯ ಮಲ್ಲಿಂಗೆರೆ ಗ್ರಾಮವನ್ನು ನೀಲಸಂದ್ರ ಗ್ರಾಮ ಪಂಚಾಯಿತಿಯಲ್ಲಿಯೇ ಮುಂದುವರೆಸುವಂತೆ ಗ್ರಾಮಸ್ಥರು ಸಕರಾತ್ಮಕ ಅಭಿಪ್ರಾಯವನ್ನು ವ್ಯಕ್ತಪಡಿಸಿರುವ ಹಿನ್ನೆಲೆಯಲ್ಲಿ ರಾಮನಗರ ಜಿಲ್ಲಾ ಜಿಲ್ಲಾಧಿಕಾರಿ ಆದ **ಕೆ.ಎಸ್. ಮಂಜುನಾಥ್, ಭಾಆಸೇ.,** ಎಂಬ ಹೆಸರಿನ ನಾನು, ನನಗೆ ಪ್ರದತ್ತವಾದ ಅಧಿಕಾರಿವನ್ನು ಚಲಾಯಿಸಿ ಈ ಕೆಳಕಂಡಂತೆ ಕೋಷ್ಟಕ (1) ಹಾಗೂ ಕೋಷ್ಟಕ (2) ರಲ್ಲಿ ವಿವರಿಸಿ ಅಂತಿಮ ಅಧಿಸೂಚನೆ ಹೊರಡಿಸಿರುತ್ತೇನೆ.

**ಕೋಷ್ಟಕ (1)**

| ಹಾಲಿ ಇರುವ ಗ್ರಾಮ ಪಂಚಾಯಿತಿ ಹಾಗೂ ಕ್ಷೇತ್ರದ ವಿವರ | | |
|---|---|---|
| **ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು** | **ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು** | **ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿ** |
| ನೀಲಸಂದ್ರ | ಮಲ್ಲಿಂಗೆರೆ | ಮಲ್ಲಿಂಗೆರೆ |

ಕೋಷ್ಟಕ (2)

| ದಿನಾಂಕ 19-01-2015 ರ ಅಧಿಸೂಚನೆಯಂತೆ ದಿನಾಂಕ : 29-01-2015 ರ ಅವಧಿಯೊಳಗೆ ಸ್ವೀಕೃತವಾದ ಹಕ್ಕು ಮತ್ತು ಆಕ್ಷೇಪಣೆಗಳ ಪರಿಶೀಲನೆ ನಂತರ ಗ್ರಾಮಸ್ಥರ ಅಭಿಪ್ರಾಯದಂತೆ ಮುಂದುವರಿಸಲಾದ ಗ್ರಾಮ ಪಂಚಾಯ್ತಿ/ಗ್ರಾಮ ಪಂಚಾಯ್ತಿ ಕ್ಷೇತ್ರದ ವಿವರ | | |
|---|---|---|
| ಗ್ರಾಮ ಪಂಚಾಯ್ತಿ ಸಂಖ್ಯೆ ಮತ್ತು ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿ |
| ನೀಲಸಂದ್ರ | ಮಲ್ಲಿಂಗೆರೆ | ಮಲ್ಲಿಂಗೆರೆ |

**ಷರಾ:** ಅಂತಿಮ ಅಧಿಸೂಚನೆಯಿಂದ ಬಾಧಿತರಾದ ಗ್ರಾಮಸ್ಥರು/ಸಾರ್ವಜನಿಕರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 4(3) ರನ್ವಯ ಮಾನ್ಯ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರಿಗೆ ಮೇಲ್ಮನವಿ ಸಲ್ಲಿಸಿಕೊಳ್ಳಬಹುದು.

**ಕೆ.ಎಸ್. ಮಂಜುನಾಥ್, ಭಾಆಸೇ.,**
ಜಿಲ್ಲಾಧಿಕಾರಿಗಳು (ಪ್ರ)
ರಾಮನಗರ ಜಿಲ್ಲೆ, ರಾಮನಗರ.

# ವಿಶೇಷ ರಾಜ್ಯ ಪತ್ರಿಕೆ

| ಭಾಗ - III | ಬೆಂಗಳೂರು, ಶನಿವಾರ, ಫೆಬ್ರವರಿ ೨೮, ೨೦೧೫ (ಫಾಲ್ಗುಣ ೦೯, ಶಕ ವರ್ಷ ೧೯೩೬) | ನಂ. ೧೮೯ |
|---|---|---|
| **Part - III** | **Bengaluru, Saturday, February 28, 2015 (Phalguna 09, Shaka Varsha 1936)** | **No. 189** |

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಕಾರ್ಯಾಲಯ**

**ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ**

**ಅಧಿಸೂಚನೆ**

**ಸಂಖ್ಯೆ: ಇ.ಎಲ್.ಎನ್.(2)/ಸಿ.ಆರ್. 84 /2014-15, ದಿನಾಂಕ: 28/02/2015**

ಕರ್ನಾಟಕ ಸರ್ಕಾರದ ನಗರಾಭಿವೃದ್ಧಿ ಸಚಿವಾಲಯದ ಅಧಿಸೂಚನೆ ಸಂಖ್ಯೆ: ನಇ.215.ಎಂಎಲ್ಆರ್.2013, ಬೆಂಗಳೂರು, ದಿನಾಂಕ 09/12/2014 ರಲ್ಲಿ ಶಿಡ್ಲಘಟ್ಟ ಪುರಸಭೆ ಪ್ರದೇಶವನ್ನು ಶಿಡ್ಲಘಟ್ಟ ಸಣ್ಣ ನಗರ ಪ್ರದೇಶವೆಂದು ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು ಶಿಡ್ಲಘಟ್ಟ ನಗರಸಭೆ ಪ್ರದೇಶವೆಂದು ಆದೇಶ ಹೊರಡಿಸಿ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿರುತ್ತದೆ. ಅದರಂತೆ ಶಿಡ್ಲಘಟ್ಟ ತಾಲ್ಲೂಕು ವ್ಯಾಪ್ತಿಯ ನಂ.7 ಹಂಡಿಗನಾಳ ಗ್ರಾಮ ಪಂಚಾಯಿತಿ ವ್ಯಾಪ್ತಿಯ ನಲ್ಲಿಮರದಹಳ್ಳಿ ಗ್ರಾಮವು ಶಿಡ್ಲಘಟ್ಟ ಪಟ್ಟಣ ವ್ಯಾಪ್ತಿಗೆ ವಿಲೀನಗೊಂಡಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮಗಳು 1993ರ ಪ್ರಕರಣ 4(2)(ಬಿ)ರ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿಕ್ಕಬಳ್ಳಾಪುರ ಜಿಲ್ಲೆಯ ಜಿಲ್ಲಾಧಿಕಾರಿಯಾದ **ಡಾ|| ಎಂ.ವಿ.ವೆಂಕಟೇಶ್, ಭಾ.ಆ.ಸೇ.,** ಆದ ನಾನು ಶಿಡ್ಲಘಟ್ಟ ತಾಲ್ಲೂಕು ವ್ಯಾಪ್ತಿಯ ನಂ.7 ಹಂಡಿಗನಾಳ ಗ್ರಾಮ ಪಂಚಾಯಿತಿ ವ್ಯಾಪ್ತಿಯ ನಲ್ಲಿಮರದಹಳ್ಳಿ ಗ್ರಾಮವನ್ನು ಗ್ರಾಮ ಪಂಚಾಯಿತಿ ವ್ಯಾಪ್ತಿಯಿಂದ ಕೈಬಿಡಲಾಗಿದೆ ಎಂದು ಘೋಷಿಸಿದೆ.

**ಡಾ|| ಎಂ.ವಿ.ವೆಂಕಟೇಶ್, ಭಾ.ಆ.ಸೇ**
ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳು
ಚಿಕ್ಕಬಳ್ಳಾಪುರ ಜಿಲ್ಲೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ - III | ಬೆಂಗಳೂರು, ಶನಿವಾರ, ಫೆಬ್ರವರಿ ೨೮, ೨೦೧೫ (ಫಾಲ್ಗುಣ ೦೯, ಶಕ ವರ್ಷ ೧೯೩೬) | ನಂ. ೧೯೧ |
|---|---|---|
| **Part - III** | **Bengaluru, Saturday, February 28, 2015 (Phalguna 09, Shaka Varsha 1936)** | **No. 191** |

**ಸಹಕಾರ ಸಚಿವಾಲಯ**

**ಸಂಖ್ಯೆ : ಸಇ 122 ಎಂಆರ್ಇ 2015, ಬೆಂಗಳೂರು, ದಿನಾಂಕ : 28-2-2015**

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಕೃಮಾಇ:01:ಚುನಾವಣೆ:2015, ಬೆಂಗಳೂರು, ದಿನಾಂಕ: 27-02-2015**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 102 ಹಾಗೂ ನಿಯಮಾವಳಿಗಳು, 1968ರ ನಿಯಮ 88ಐರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ

ಡಾ: ಮುದ್ದು ಮೋಹನ್ ಆದ ನಾನು ಮಂಡ್ಯ, ದಕ್ಷಿಣ ಕನ್ನಡ, ಉತ್ತರ ಕನ್ನಡ, ಬೀದರ್ ಮತ್ತು ಉಡುಪಿ ಜಿಲ್ಲೆಗಳಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸಿರುತ್ತೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರ ಹೆಸರು |
|---|---|---|
| 1 | ಮಂಡ್ಯ | ಶ್ರೀ ಅಂಬರೀಶ್,<br>ಅಧ್ಯಕ್ಷರು,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮದ್ದೂರು. |
| 2 | ದಕ್ಷಿಣ ಕನ್ನಡ | ಶ್ರೀ ಕೃಷ್ಣ ಶೆಟ್ಟಿ ಕಡಬ,<br>ಅಧ್ಯಕ್ಷರು,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಪುತ್ತೂರು. |
| 3 | ಉತ್ತರ ಕನ್ನಡ | ಶ್ರೀ ರಾಮನಾಥ ಶ್ರೀಧರ ಶ್ಯಾನಭಾಗ,<br>ಅಧ್ಯಕ್ಷರು,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕುಮಟಾ. |
| 4 | ಬೀದರ್ | ಶ್ರೀ ಸಿದ್ರಾಮಪ್ಪಾ ಬಸವಣಪ್ಪಾ ಗುದಗೆ,<br>ಅಧ್ಯಕ್ಷರು,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಸವಕಲ್ಯಾಣ. |
| 5 | ಉಡುಪಿ | ಶ್ರೀ ಸುಧಾಮ ಶೆಟ್ಟಿ,<br>ಅಧ್ಯಕ್ಷರು,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಉಡುಪಿ. |

**ಡಾ: ಮುದ್ದು ಮೋಹನ್**
ನಿರ್ದೇಶಕರು, ಕೃಷಿ ಮಾರಾಟ ಇಲಾಖೆ
**ಈ. ಪಾಪಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ – III | ಬೆಂಗಳೂರು, ಶನಿವಾರ, ಫೆಬ್ರವರಿ ೨೮, ೨೦೧೫ (ಫಾಲ್ಗುಣ ೦೯, ಶಕ ವರ್ಷ ೧೯೩೬) | ನಂ. ೧೯೩ |
|---|---|---|
| **Part – III** | **Bengaluru, Saturday, February 28, 2015 (Phalguna 09, Shaka Varsha 1936)** | **No. 193** |


**ಪ್ರಾದೇಶಿಕ ಆಯುಕ್ತರ ಕಾರ್ಯಾಲಯ**

**2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು–27**

**ಅಧಿಸೂಚನೆ**

**ಸಂಖ್ಯೆ: ಪ್ರಾಆಕ.ಚುನಾವಣೆ.ವಿವ/23/2013–14 ದಿನಾಂಕ: 27–2–2015**

ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಪೂರ್ವ ತಾಲ್ಲೂಕು ಪಂಚಾಯಿತಿಯಲ್ಲಿ ತೆರವಾದ 2–ಯರಪ್ಪನಹಳ್ಳಿ ಕ್ಷೇತ್ರದ ಸದಸ್ಯ ಸ್ಥಾನಕ್ಕೆ ಬೆಂಗಳೂರು ನಗರ ಜಿಲ್ಲಾಧಿಕಾರಿಯವರು 1993ರ ಕರ್ನಾಟಕ ಪಂಚಾಯತ್‌ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು, 12ನೇ ನಿಯಮದ ಉಪನಿಯಮ (2)ರ ಮೇರೆಗೆ ದಿನಾಂಕ: 1–2–2015ರಂದು ಉಪ ಚುನಾವಣೆಯನ್ನು ನಡೆಸಿರುತ್ತಾರೆ, ಮತ್ತು ಸದರಿ ತಾಲ್ಲೂಕು ಪಂಚಾಯಿತಿಯ ಮತಕ್ಷೇತ್ರದಲ್ಲಿ ನಡೆಸಲಾದ ಉಪಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ದಿನಾಂಕ:4–2–2015 ರಂದು ಘೋಷಿಸಿರುತ್ತಾರೆ.

ಆದುದರಿಂದ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993, ಕಲಂ 137ರ ಅನ್ವಯ ತಾಲ್ಲೂಕು ಪಂಚಾಯಿತಿಯಲ್ಲಿ ಉಂಟಾದ ಮೇಲ್ಕಂಡ ಖಾಲಿ ಸ್ಥಾನವನ್ನು ಭರ್ತಿ ಮಾಡಲು ನಡೆಸಿದ ಉಪ ಚುನಾವಣೆಯಲ್ಲಿ ಆಯ್ಕೆಯಾದ ಅಭ್ಯರ್ಥಿಯು ``ಅವನು ಯಾರ ಸ್ಥಾನದಲ್ಲಿ ಚುನಾಯಿತನಾಗಿರುವನೋ ಆ ಸ್ಥಾನವು ತೆರವಾಗದೇ ಇದ್ದಿದ್ದರೆ ಆ ಸದಸ್ಯನು ಎಲ್ಲಿಯವರೆಗೆ ಹುದ್ದೆಯನ್ನು ಧಾರಣ ಮಾಡುತ್ತಿದ್ದನೋ ಆ ಅವಧಿಯವರೆಗೆ ಮಾತ್ರ ಹುದ್ದೆಯನ್ನು ಧಾರಣ ಮಾಡತಕ್ಕದ್ದು ``ಎಂದು ನಮೂದಿಸಿರುವುದರಿಂದ, ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993 (1993ರ ಕರ್ನಾಟಕ ಅಧಿನಿಯಮ 14) ಕಲಂ 133ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಅನುಬಂಧದಂತೆ ಉಪಚುನಾವಣೆಯಲ್ಲಿ ಉಳಿದ ಅವಧಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಅಧಿಸೂಚಿಸಿದೆ

7. **ದೂರುಗಳಿಗೆ ನೀಡಲಾದ ಶೀರ್ಷಿಕೆಗಳು :–** ದಾವೆಗಳನ್ನು ನ್ಯಾ.ಪ್ರ.ಜಿ.ಪಿ/ಸಿ.ಟಿ.ಪಿ/ಸಿ.ಜೆಡ್.ಪಿ/ಎಡಿಎ ಹಾಗೂ ಇತರೆ ಎಂದು ಉಲ್ಲೇಖಿಸತಕ್ಕದ್ದು.

**ಉದಾ:** ಎಸ್.ಇ.ಸಿ.02.ಎಡಿಎ.2011

8. **ದೂರನ್ನು ದಾಖಲಿಸುವ ಕುರಿತಾದ ಪ್ರಕ್ರಿಯೆ:** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗಕ್ಕೆ ಹಾಜರುಪಡಿಸಬೇಕಾದ ಅಥವಾ ದಾಖಲಿಸಬೇಕಾದ ಪ್ರತಿಯೊಂದು ವಕಾಲತ್ತು, ಪ್ರಮಾಣಪತ್ರ (ಅಫಿಡವಿಟ್), ನಿವೇದನಾ ಪತ್ರ ಹಾಗೂ ದಾಖಲೆಗಳ ಪಟ್ಟಿಗಳು ಚೊಕ್ಕವಾಗಿ ಹಾಗೂ ಸುಸ್ಪಷ್ಟವಾಗಿ ಬಾಳಿಕೆ ಬರುವಂತಹ ಪೇಪರ್‌ನಲ್ಲಿ ಅಂದರೆ ಮೆಟ್ರಿಕ್ ಎ4 ಅಳತೆಯಿದ್ದು (30.5 ಸೆಂ.ಮಿ ಉದ್ದ, ಹಾಗೂ 21.5 ಸೆಂ.ಮಿ ಅಗಲ) 4.9 ಕ್ರಿ.ಗ್ರಾಂ.ಗೆ ಕಡಿಮೆಯಿರುವ ತೂಕ್ಕ ಉಳ್ಳ ರೀಮ್ ಪೇಪರ್‌ನಲ್ಲಿ ಇಂಗ್ಲೀಷ್‌ನಲ್ಲಿ ಅಥವಾ ಕನ್ನಡದಲ್ಲಿ ಬೆರಳಚ್ಚು ಮಾಡಿರತಕ್ಕದ್ದಾಗಿರಬೇಕು. ವಕಾಲತ್ತುಗಳನ್ನು ಹೊರತುಪಡಿಸಿದ ಇನ್ನಿತರ ದಾಖಲೆಗಳು ಇದ್ದಲ್ಲಿ ಅವುಗಳು 3.0 ಕ್ರಿ.ಗ್ರಾಂ.ಗೆ ಕಡಿಮೆಯಿರದರೀಮಿನ ಪೇಪರಿನಲ್ಲಿ ಸುತ್ತ ಅಂಚು 6.5 ಸೆಂ.ಮಿ ಅಗಲ ಹಾಗೂ ಒಳ ಅಂಚು 2.5 ಸೆಂ.ಮಿ ಅಗಲ ಪೇಪರ್ ಬುಕ್‌ನ ಮಾದರಿಯುಳ್ಳ ಪೇಪರಿನಲ್ಲಿ ಬೆರಳಚ್ಚು ಮಾಡಿರತಕ್ಕದ್ದು.

(2) ಎಲ್ಲಾ ವಕಾಲತ್ತುಗಳು ಪಕ್ಷಗಾರನ ಸಹಿ ಮತ್ತು ದಿನಾಂಕವನ್ನೊಳಗೊಂಡಿರತಕ್ಕದ್ದು ಹಾಗೂ ಅದು ಕರ್ನಾಟಕ ರಾಜ್ಯ ಚುನಾವಣಾ ಆಯೋಗಕ್ಕೆ ಸಲ್ಲಿಸಿದ ದಿನಾಂಕವನ್ನು ಸ್ಪಷ್ಟವಾಗಿ ನಮೂದಿಸತಕ್ಕದ್ದು.

(3) ಎಲ್ಲಾ ದಿನಾಂಕಗಳು, ಮೊತ್ತಗಳು ಹಾಗೂ ಅಂಕಿಗಳನ್ನು ಪದಗಳಲ್ಲಿಯೂ ಹಾಗೂ ಅಂಕಿಗಳಲ್ಲಿ ಬರೆಯತಕ್ಕದ್ದು ಹಾಗೂ ಪದಗಳನ್ನು ಈ ಕೆಳಗೆ ಸೂಚಿಸಿದಂತೆ ಆವರಣದಲ್ಲಿ ಬರೆಯತಕ್ಕದ್ದು

(ಎ) 7ನೇ ಸೆಪ್ಟೆಂಬರ್ 2011 (ಎರಡು ಸಾವಿರದ ಹನ್ನೊಂದರ ಸೆಪ್ಟೆಂಬರ್‌ನ ಏಳನೆಯ ದಿನ)

(ಬಿ) ರೂ.10,000/– (ಹತ್ತು ಸಾವಿರ ರೂಪಾಯಿಗಳು ಮಾತ್ರ)

(4) ಕರ್ನಾಟಕ ರಾಜ್ಯ ಚುನಾವಣಾ ಆಯೋಗಕ್ಕೆ ಸಲ್ಲಿಸಲಾದ ಎಲ್ಲಾ ದಾಖಲೆಗಳು ಬೆರಳಚ್ಚು ಮಾಡಲ್ಪಟ್ಟಿದ್ದು ಪ್ರಮಾಣೀಕರಿಸಲ್ಪಟ್ಟಿರತಕ್ಕದ್ದು.

**ಸೂಚನೆ :**ಬೆರಳಚ್ಚು ಪ್ರತಿಗಳ ದಾಖಲೆಗಳ ಬದಲಾಗಿ ದಾಖಲೆಗಳ ಜೆರಾಕ್ಸ್ ಪ್ರತಿಗಳನ್ನು ಸಲ್ಲಿಸಲು ಅನುಮತಿಯಿರುತ್ತದೆ. ಪರಂತು ಅವುಗಳು ಸ್ಪಷ್ಟವಾಗಿ ಹಾಗೂ ಸ್ಫುಟವಾಗಿರಬೇಕು.

(5) ದಾಖಲೆಗಳನ್ನು **"ನೈಜಪ್ರತಿ"** ಯೆಂದು ದೃಢೀಕರಿಸುವ ವ್ಯಕ್ತಿಯು ಅಂತಹ ದಾಖಲೆಗಳನ್ನು ಅವನ ಪೂರ್ಣ ಸಹಿಯೊಂದಿಗೆ ಈ ಕೆಳಗ ನಮೂದಿಸಿದ ರೀತಿಯಲ್ಲಿ ಪ್ರಮಾಣೀಕರಿಸಬೇಕು.

**"**ಇದು ಅರ್ಜಿದಾರ .. . . . . . . . . . . . . . . . . . . . . . . . . (ವಕೀಲರ ಹೆಸರು ಬೆರಳಚ್ಚು ಮಾಡಿರಬೇಕು) ಇವರ ಅನುಬಂಧ . . . . . . . . . . ದಲ್ಲಿ ಉಲ್ಲೇಖಿಸಿರುವ ದಾಖಲೆಗಳ ನೈಜ ಪ್ರತಿಯಾಗಿರುತ್ತದೆ. ವಾದಿ(ಗಳ)/ ಪ್ರತಿವಾದಿಗ(ಗಳ) ವಕೀಲರು.

9. **ದೂರುಗಳ ಪರಿಶೋಧನೆ:** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ದಾಖಲಾದ ಪ್ರತಿಯೊಂದು ದೂರನ್ನು ಕ್ರಮಾಂಕಿಸತಕ್ಕದ್ದು,

(2)ದಾಖಲಿಸುವ ದೂರಿನಲ್ಲಿ ಲೋಪವೇನಾದರೂ ಕಂಡುಬಂದಲ್ಲಿ ಅಂತಹ ಲೋಪಗಳ ವಿವರಗಳನ್ನು ದಾಖಲಿಸಿಕೊಳ್ಳತಕ್ಕದ್ದು ಮತ್ತು ಈ ಲೋಪಗಳನ್ನು ಪಕ್ಷಗಾರನ ಅಥವಾ ಅವನ ಪ್ರತಿನಿಧಿಗಳ ಗಮನಕ್ಕೆ ತಂದು, ಅವುಗಳನ್ನು 15 ದಿನಗಳೊಳಗೆ ಲೋಪಗಳನ್ನು ಸರಿಪಡಿಸಬೇಕೆಂತಲೂ ತಿಳಿಸತಕ್ಕದ್ದು.

(3) ನೀಡಿದ ಗಡುವು ಮೀರಿದ ಮೇಲೆ, ಲೋಪಗಳನ್ನು ಸರಿಪಡಿಸಿದೆಯೇ? ಇಲ್ಲವೇ? ಎಂಬುದನ್ನು ಪರಿಗಣಿಸದೆಯೇ ಅಂತಹ ದೂರುಗಳನ್ನು ಕರ್ನಾಟಕ ರಾಜ್ಯ ಚುನಾವಣಾ ಆಯುಕ್ತರಿಗೆ ಸೂಕ್ತ ಆದೇಶಕ್ಕಾಗಿ ಮಂಡಿಸತಕ್ಕದ್ದು.

10. **ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಎದುರು ವೃತ್ತಿಗಾರರು,** – (1) ಈ ಮುಂದಿನ ಉಪಬಂಧಗಳಿಗೆ ಒಳಪಟ್ಟು, ಯಾವುದೇ ವಕೀಲರಾಗಲೀ ಅಥವಾ ವಕೀಲ ವೃಕ್ತಿಗಾರರಾಗಲೀ ಅವರು ಯಾವ ಪಕ್ಷಗಾರನ ಪರವಾಗಿ ವಾದಿಸಲು ಹೊರಟಿರುವರೋ ಅಂತಹವರಿಂದ ಹಾಕಲ್ಪಟ್ಟಿರುವ ಮತ್ತು ಕಾರ್ಯಗತಗೊಳಿಸಿದ ವಕಾಲತ್ತನ್ನು ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ದಾಖಲಿಸದ ಹೊರತು ಅವನು ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಮುಂದೆ ಯಾವುದೇ ವಿಷಯದಲ್ಲಿ ಹಾಜರಾಗುವುದಕ್ಕಾಗಲೀ ಅಥವಾ ಭಾಗಿಯಾಗುವುದಕ್ಕಾಗಲೀ ಅರ್ಹನಾಗಿರತಕ್ಕದ್ದಲ್ಲ.

(2) ಒಂದು ವೇಳೆ ಒಬ್ಬ ವಕೀಲರು ವಕಾಲತ್ತನ್ನು ಹೂಡಿದ್ದು, ತನ್ನ ಕಕ್ಷಿದಾರರ ದಾವೆಯಲ್ಲಿ ಹಾಜರಾಗಲು ಮತ್ತು ವಾದ ಮಂಡಿಸಲು ಆದರೆ ಕಕ್ಷಿದಾರರ ಪರವಾಗಿ ವರ್ತಿಸದೇ ಇರುವಂತಹ ಮತ್ತೊಬ್ಬ ವಕೀಲರನ್ನು ತೊಡಗಿಸಿದ್ದೇ ಆದಲ್ಲಿ ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಅಂತಹ ವಕೀಲರಿಂದ ವಕಾಲತ್‌ನಾಮ ದಾಖಲಿಸಿಕೊಂಡ ನಂತರ ಅಥವಾ ಹಾಜರಾತಿಗಾಗಿ ನಿವೇದನೆ ಪತ್ರ ಸಲ್ಲಿಸಿದಾಗ ಹಾಜರಾಗಲು ಹಾಗೂ ವಾದಿಸಲು ಅನುಮತಿಯನ್ನು ನೀಡಬಹುದು.

(3) ಈಗಾಗಲೇ ಒಬ್ಬ ವಕೀಲನು ದಾಖಲಾಗಿರುವ ಒಂದು ವ್ಯವಹರಣೆಯಲ್ಲಿ ಬೇರೊಬ್ಬ ವಕೀಲನು ವಕಾಲತ್‌ನಾಮ ಸಲ್ಲಿಸಲು ಇಚ್ಛಿಸಿದಲ್ಲಿ ಈಗಾಗಲೇ ದಾಖಲಾಗಿರುವ ವಕೀಲನಿಂದ ಲಿಖಿತ ಒಪ್ಪಿಗೆ ಪತ್ರ ಅಥವಾ ನಿರಪೇಕ್ಷಣಾ ಪತ್ರ ಹಾಜರುಪಡಿಸದೆ ಅಥವಾ ಒಂದು ವೇಳೆ ಅಂತಹ ಒಪ್ಪಿಗೆ ಪತ್ರ ತಿರಸ್ಕೃತವಾದ ಪಕ್ಷದಲ್ಲಿ ಅಥವಾ ಸಲಹೆಗಾರರಿಗೆ ಸಾಕಷ್ಟು ಸತತವಾಗಿ ಸಂಪರ್ಕಿಸಲು ಪ್ರಯತ್ನಿಸಿಯೂ ಪಡೆಯಲಿಕ್ಕೆ ಸಾಧ್ಯವಾಗದ ಕಾರಣಗಳಿಂದಾಗಿ ಅಥವಾ ಇತರ ಯಾವುದೇ ಸದ್ಭಾವನೆಯ ಕಾರಣಗಳಿಂದಾಗಿ ಅಥವಾ ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ವಿಶೇಷ ಅನುಮತಿಯನ್ನು ಪಡೆಯದೇ ಹಾಗೆ ಮಾಡತಕ್ಕದ್ದಲ್ಲ.

(4) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ವಕಾಲತ್‌ನಾಮ ಸಲ್ಲಿಸುವ ಮೊದಲು ವಕೀಲರು ತಮ್ಮ ಸಹಮತಿಯನ್ನು ಅವರ ಸಹಿಯ ಮೇಲು ಭಾಗದಲ್ಲಿ ದಾಖಲಿಸತಕ್ಕದ್ದು ಹಾಗೂ ಅಂತಹ ಸಹಮತಿಯ ದಿನಾಂಕವನ್ನು ನಮೂದಿಸತಕ್ಕದ್ದು, ವ್ಯವಹಾರಕ್ಕಾಗಿ ಅವರು ತಮ್ಮ ವಿಳಾಸ ಹಾಗೂ ಟೆಲಿಫೋನಿನ ನಂಬರನ್ನು ಸಹಾ ನಮೂದಿಸತಕ್ಕದ್ದು.

(5) ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಅನುಮತಿಗೆ ಒಳಪಟ್ಟು, ಒಬ್ಬ ಪಕ್ಷಗಾರನು ತನ್ನ ಪರವಾಗಿ ಹಾಜರಾಗಲು ಒಬ್ಬ ವಕೀಲರನ್ನು ಗೊತ್ತುಪಡಿಸಿದ್ದಲ್ಲಿ, ಅವನು ತನ್ನಿಂದ ಕಾರ್ಯಗತಗೊಳಿಸಿದ ವಕಾಲತ್ತನ್ನು ಹಿಂತೆಗೆದುಕೊಂಡಲ್ಲದೆ ಅವನು ಸ್ವತಃ ವಿಚಾರಣೆಗೆ ಹಾಜರಾಗಲು ಅರ್ಹನಾಗಿರತಕ್ಕದ್ದಲ್ಲ.

11. **ವಿಚಾರಣಾವಧಿಯಲ್ಲಿ ಅರ್ಜಿಗಳನ್ನು ಹಾಜರುಪಡಿಸುವ ಕುರಿತಂತೆ ಕಾರ್ಯವಿಧಾನ:–** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗಕ್ಕೆ ಒಪ್ಪಿಸಬೇಕಾದ ಸಂಖ್ಯೆಗಳಷ್ಟು ಅರ್ಜಿಗಳ ಪ್ರತಿಗಳೊಂದಿಗೆ ಅನುಬಂಧವನ್ನೊಳಗೊಂಡ ಒಂದು ಹೆಚ್ಚುವರಿ ಅರ್ಜಿಯ ಪ್ರತಿಯನ್ನು ಸಲ್ಲಿಸತಕ್ಕದ್ದು.

(2) ಯಾವುದೇ ದೂರಿನ ಅರ್ಜಿಯು ಒಂದು ಸಂಘದಿಂದ ಹುಡಲಾಗಿದೆಯೆಂದು ತೋರಿಬಂದಲ್ಲಿ ಅಂತಹ ಅರ್ಜಿಯನ್ನು ಸಹಿ/ ಸಹಿಗಳನ್ನು ಮಾಡುವ ವ್ಯಕ್ತಿ ಅಂದರೆ ಯಾರಿಗೆ ಈ ತೆರನಾದ ಅರ್ಜಿಗಳನ್ನು ಸಹಿ ಮಾಡುವ ಹಾಗೂ ವಕಾಲತ್ತನ್ನು ಪರಿಶೀಲನೆ ಮಾಡುವ ಅಧಿಕಾರ ನೀಡಲಾಗಿದೆಯೋ ಅವರು ಈ ಅರ್ಜಿಯೊಂದಿಗೆ ಸಂಘದ ಉಪವಿಧಿಯ ಅಥವಾ ನಿಯಮಗಳ ಪ್ರತಿಯನ್ನು ಹಾಗೂ ಹಾಗೆ ಸಹಿ ಮಾಡಲು ಅಧಿಕಾರ ನೀಡಿರುವ ಸಂಘದ ನಿರ್ಣಯದ ಪ್ರತಿಯೊಂದನ್ನು ಸಹಾ ಒಪ್ಪಿಸತಕ್ಕದ್ದು.

12. **ವಿಚಾರಣಾವಧಿಯ ಅರ್ಜಿಗಳಲ್ಲಿರಬೇಕಾದ ವಿವರಗಳು:–** (1) ವಿಚಾರಣಾವಧಿಯ ಅರ್ಜಿಯು ಈ ಕೆಳಕಂಡ ವಿವರಗಳನ್ನು ಹೊಂದಿರತಕ್ಕದ್ದು, ಎಂದರೆ ;–

(ಎ) ಎಲ್ಲಾ ವಿಚಾರಣಾವಧಿಯ ಅರ್ಜಿಗಳು ಅರ್ಜಿದಾರರ/ ಗಳ/ ಪ್ರತಿವಾದಿ/ ಗಳ ಹೆಸರುಗಳನ್ನು ಹೊಂದಿರತಕ್ಕದ್ದು ಹಾಗೂ ಮುಖ್ಯ ಅರ್ಜಿಯಲ್ಲಿ ನಿರ್ದಿಷ್ಟವಾಗಿ ಅವನ/ ಅವರ ಶ್ರೇಣಿ ಹಾಗೂ ಸ್ಥಾನಮಾನಗಳನ್ನು ಸ್ಪಷ್ಟವಾಗಿ ನಮೂದಿಸಿರತಕ್ಕದ್ದು.

(ಬಿ) ಒಂದು ವಿಚಾರಣಾವಧಿಯ ಅರ್ಜಿಯಲ್ಲಿ ಕೇವಲ ಒಂದು ಪರಿಹಾರವನ್ನು ಮಾತ್ರ ಕೇಳಲು ಹಕ್ಕುಳವರಾಗಿರತಕ್ಕದ್ದು.

(ಸಿ) ಕ್ರಮಬದ್ಧವಾಗಿರುವವೆಂದು ಖಚಿತಪಟ್ಟ ಎಲ್ಲಾ ವಿಚಾರಣಾವಧಿಯ ಅರ್ಜಿಗಳನ್ನು ಪರಿಶೀಲನೆಯ ನಂತರ ಆದೇಶಕ್ಕಾಗಿ ತೀರ್ಮಾನಕ್ಕೆ ಕಾದಿರುವ ಪೀಠದಲ್ಲಿ ಅವುಗಳ ಪಟ್ಟಿ ಮಾಡುವ ಮೊದಲು ಅವುಗಳನ್ನು ಆರ್ಡರ್ ಶೀಟ್‌ನಲ್ಲಿ 'ಐಎ–I' 'ಐಎ–II' ಎಂದು ಕ್ರಮಾಂಕ ನೀಡಿ ದಾಖಲಿಸತಕ್ಕದ್ದು;

(ಡಿ) ವಿಚಾರಣಾವಧಿಯ ಅರ್ಜಿಗಳ ಜೋಡಣೆಯು ಅನುಕ್ರಮನುಸಾರ ಪ್ರಕಾರ ಇರತಕ್ಕದ್ದು ಮತ್ತು ಒಂದು ವೇಳೆ ಇಂತಹ ವಿಚಾರಣಾವಧಿಯ ಅರ್ಜಿಗಳಿಗೆ ಪ್ರತಿವಾದಿಗಳಿಂದ ಆಕ್ಷೇಪಣೆಗಳು ಯಾವುದಾದರೂ ದಾಖಲಾಗಿದ್ದಲ್ಲಿ ಅವುಗಳನ್ನು ಸಂಬಂಧಪಟ್ಟ ವಿಚಾರಣಾವಧಿಯ ಅರ್ಜಿಗಳ ಅಡಿಯಲ್ಲಿ ಇರಿಸಬೇಕು;

(ಇ) ವಿಚಾರಣಾವಧಿಯ ಅರ್ಜಿಯ ಸಂಬಂಧದಲ್ಲಿ ಒಂದು ಆದೇಶ ಹೊರಡಿಸಲಾಗಿದ್ದರೆ, ನ್ಯಾಯಾಲಯದ ಅಧಿಕಾರಿಯು ಅಂತಹ ವಿಚಾರಣಾವಧಿಯ ಅರ್ಜಿಗಳ ಮೇಲೆ ಅದು ವಿಲೇಗೊಂಡ ಕುರಿತಂತೆ "ದಿನಾಂಕ . . . . . . . . . .. ರ ಆದೇಶದ ಅನ್ವಯ ವಿಲೇ ಮಾಡಲಾಗಿದೆ" ಎಂದು ಅದರ ಮೇಲೆ ಟಿಪ್ಪಣಿಯನ್ನು ಬರೆಯತಕ್ಕದ್ದು;

(ಎಫ್) ವಿನಾಯತಿ ಹೊಂದಿರುವ ಸಂದರ್ಭವನ್ನು ಹೊರತುಪಡಿಸಿ, ಉಳಿದ ಯಾವುದೇ ಸಂದರ್ಭದಲ್ಲಿ ವಿಚಾರಣಾವಧಿಯ ಅರ್ಜಿಗಳನ್ನು ನ್ಯಾಯಪೀಠದ ಅನುಮತಿಯಿಲ್ಲದೇ ನ್ಯಾಯಾಂಗಣದಲ್ಲಿ ದಾಖಲಿಸಲು ಅವಕಾಶವಿರತಕ್ಕದ್ದಲ್ಲ.

(ಜಿ) ಒಂದು ವೇಳೆ ಯಾವುದೇ ವಿಚಾರಣಾವಧಿಯ ಅರ್ಜಿಯನ್ನು ನ್ಯಾಯಾಲಯದಲ್ಲಿ ದಾಖಲಿಸಲು ಅನುಮತಿ ನೀಡಲಾಗಿದ್ದಲ್ಲಿ, ಅಂತಹ ವಿಚಾರಣಾವಧಿಯ ಅರ್ಜಿಯ ಕುರಿತಂತೆ ನ್ಯಾಯಾಲಯದ ಅಧಿಕಾರಿಯು ಮೇಲಿನ (ಎ) ಯಿಂದ (ಡಿ) ರವರೆಗಿನ ಖಂಡಗಳಲ್ಲಿ ವಿವರಿಸಿದಂಥ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು.

(2)ವಿಚಾರಣಾವಧಿಯ ಅರ್ಜಿಗಳ ವಿಚಾರಣಾ ಕ್ರಮ :–

(ಎ) ಮೂಲ ಅರ್ಜಿ ಸಲ್ಲಿಸಿದ ನಂತರದಲ್ಲಿ ವಿಚಾರಣಾವಧಿಯ ಅರ್ಜಿಗಳನ್ನು ಸಲ್ಲಿಸಿದ ಪ್ರಕರಣಗಳಲ್ಲಿ ಮತ್ತು ಇದರಿಂದಾಗಿ ಈಗಾಗಲೇ ಪ್ರಕರಣದಲ್ಲಿ ಹಾಜರಾಗಿರುವ ಪಕ್ಷಗಾರರು ಬಾಧಿತರಾಗುವ ಪ್ರಸಂಗ ಏರ್ಪಟ್ಟಲ್ಲಿ, ಅಂತಹ ವಿಚಾರಣಾವಧಿಯ ಅರ್ಜಿಗಳು ವಾದಕ್ಕೆ ಪ್ರವೇಶಿಸಿದ್ದೇ ಆದರೆ ಅಂತಹ ವಿಚಾರಣಾವಧಿಯ ಅರ್ಜಿಗಳಿಗೆ ಸಂಬಂಧಿಸಿದಂತೆ ವಕೀಲರಿಗೆ ಅಥವಾ ಪಕ್ಷಗಾರರಿಗೆ ನೋಟಿಸ್ ಮುಖಾಂತರ ತಿಳಿಸಿ ವಿಚಾರಣಾವಧಿಯ ಅರ್ಜಿಯ ಪ್ರತಿಯನ್ನು ಅವುಗಳ ಅನುಬಂಧವೇನಾದರೂ ಇದ್ದಲ್ಲಿ ಅದರ ಸಹಿತ ಅಂತಹ ಪಕ್ಷಗಾರರಿಂದ ಅಥವಾ ವಕೀಲರಿಂದ ಅಥವಾ ನೋಂದಾಯಿತ ಗುಮಾಸ್ತರಿಂದ ಸ್ವೀಕರಿಸಿದ್ದಕ್ಕೆ ಸಾಕ್ಷಿಯಾಗಿ ದಾಖಲೆಯನ್ನು ಪಡೆದು ಈ ಎಲ್ಲದರ ಸಾಕ್ಷ್ಯಾಧಾರಗಳನ್ನು ವಿಚಾರಣಾವಧಿಯ ಅರ್ಜಿಗಳೊಂದಿಗೆ ಹಾಜರುಪಡಿಸದ ಹೊರತು ಅಂತಹ ವಿಚಾರಣಾವಧಿಯ ಅರ್ಜಿಗಳನ್ನು ವಿಚಾರಣೆಗಾಗಿ ನಿಗದಿಪಡಿಸತಕ್ಕದ್ದಲ್ಲ.

(ಬಿ) ಅರ್ಜಿದಾರನಾಗಲೀ ಅಥವಾ ವಕೀಲನಾಗಲೀ ಪ್ರತಿವಾದಿಯು ಅರ್ಜಿಯ ಪ್ರತಿಯನ್ನು ಪಡೆಯಲು ನಿರಾಕರಿಸಿದ ಬಗ್ಗೆ ಅಥವಾ ಸತತ ಪ್ರಯತ್ನದಿಂದಲೂ ನೋಟಿಸನ್ನು ತಲುಪಿಸಲಿಕ್ಕಾಗದ ಬಗ್ಗೆ ಅರ್ಜಿಯ ಮೇಲೆ ಹಿಂಬರಹ ನೀಡಿದರೆ, ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಅಂತಹ ವಿಚಾರಣಾವಧಿಯ ಅರ್ಜಿಗಳನ್ನು ಸ್ವೀಕರಿಸಲು ಹಾಗೂ ನೋಂದಾಯಿಸಲು ನಿರ್ದೇಶನ ನೀಡಬಹುದು.

(ಸಿ) ಅಂಥ ಹಿಂಬರಹವು, ಅದನ್ನು ನೀಡಿದ ಹಾಗೂ ತಿರಸ್ಕರಿಸಲಾದ ವೇಳೆ ದಿನಾಂಕ ಹಾಗೂ ಸ್ಥಳದ ವಿವರವನ್ನು ಹೊಂದಿರತಕ್ಕದ್ದು.

(3) ಯಾವ ಪಕ್ಷಗಾರರಿಗೆ ಅರ್ಜಿಯ ನೋಟಿಸು ನೀಡಬೇಕೆಂಬ ವಿಚಾರದಲ್ಲಿ ಕರ್ನಾಟಕ ರಾಜ್ಯ ಚುನಾವಣಾ ಆಯೋಗಕ್ಕೆ ಅರ್ಜಿದಾರನು ಅರ್ಜಿ ಸಲ್ಲಿಸದ ಹೊರತು, ಆದೇಶಿಸುವುದೋ ಅಲ್ಲಿಯ ತನಕ ಅರ್ಜಿದಾರರು ಈ ವಿಚಾರದಲ್ಲಿ ಅಥವಾ ಸೂಕ್ತವಾದ ಮೊತ್ತದ ಸಂಸ್ಕರಣ ವೆಚ್ಚದ ಕೋರ್ಟು ಫೀ ಲೇಬಲ್‌ವುಳ್ಳ ಪತ್ರಗಳು ಅಂಟಿಸುವುದರ ಜೊತೆಯಲ್ಲಿ ಅಷ್ಟೆ ಸಂಖ್ಯೆಯ ಸಾದಾ ಪೇಪರ್‌ನಲ್ಲಿರುವ ನೋಟಿಸು ಜಾರಿ ಮಾಡಬೇಕಾಗಿರುವ ಪಕ್ಷಗಾರರಷ್ಟು ಅರ್ಜಿಯ ಪ್ರತಿಗಳ ಹಾಗೂ ಸಮರ್ಥಿಸುವ ಪ್ರಮಾಣ ಪತ್ರಗಳು ಅಥವಾ ಅಂಶಗಳ ನಿವೇದನೆ ಪತ್ರಗಳು ಹಾಗೂ ಅನುಬಂಧಗಳು, ಯಾವುದಾದರೂ ಇದ್ದರೆ, ಅವೂ ಹಾಗೂ ಕಛೇರಿಯ ಆಕ್ಷೇಪಣೆಗಳ ಅನುಸರಣೆಯೊಂದಿಗೆ ಜಾರಿ ಮಾಡಬೇಕೆಂದು ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ನಿರ್ದೇಶಿಸಲ್ಪಟ್ಟಿದ್ದ ಹೊರತು, ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ಹೊರಡಿಸಲಾದ ಮಧ್ಯಂತರ ಆದೇಶದ ಪ್ರತಿಯನ್ನು ಪ್ರತಿವಾದಿಗಳಿಗೆ ನೋಟಿಸು ಜಾರಿ ಮಾಡುವ ಮುನ್ನ ಅರ್ಜಿದಾರರಿಗಾಗಲೀ ಅಥವಾ ಸಂಬಂಧಿಸಿದ ಪ್ರಾಧಿಕಾರಕ್ಕಾಗಲೀ ನೀಡತಕ್ಕದ್ದಲ್ಲ.

(4) ವಿಚಾರಣಾವಧಿಯ ಅರ್ಜಿಗಳಿಗೆ ನಿಗದಿಪಡಿಸಿರುವ ಫೀಸು, ದೃಢೀಕರಿಸಿದ ಪ್ರತಿಗಳಿಗೆ ಯಾವ ಫೀಸನ್ನು ನಿಗದಿಪಡಿಸಿದೆಯೋ ಅದಕ್ಕೆ ಸಮವಾಗಿ ಇರತಕ್ಕದ್ದು.

13. **ಅಫೀಡವಿಟ್ ಪತ್ರದ ಒಳಾಂಶಗಳು:–** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಸಲ್ಲಿಸಲಾದ ಪ್ರತಿಯೊಂದು ಅಫೀಡವಿಟ್ ವಿಷಯಗಳ ಅಥವಾ ನಡವಳಿಕೆಗಳ ವ್ಯಾಜ್ಯಕಾರಣವನ್ನು ಬಿಂಬಿಸುವಂತಿರತಕ್ಕದ್ದು ಮತ್ತು ವಿಚಾರಣಾವಧಿಯ ಅರ್ಜಿಗಳ ಅಫಿಡವಿಟ್ ಸಹಾ ಇದೇ ರೀತಿ ಇರತಕ್ಕದ್ದು.

(2) ಅಫೀಡವಿಟ್ ಮಾಡುವ ಪ್ರತಿಯೊಬ್ಬ ವ್ಯಕ್ತಿಯು, ತನ್ನನ್ನು ಸ್ಪಷ್ಟವಾಗಿ ಗುರ್ತಿಸಿಕೊಳ್ಳಬಹುದಾದ ರೀತಿಯಲ್ಲಿ ಎಲ್ಲ ಅಗತ್ಯ ವಿವರಗಳನ್ನೊಳಗೊಂಡಿರುವ ತನ್ನ ವಿವರವನ್ನು ವಿವರಿಸತಕ್ಕದ್ದು.

(3) ಒಂದು ಅಫೀಡವಿಟ್ ಹೇಳಿಕೆಗಳ ಅಂಶಗಳ ವಿವರಗಳನ್ನು ಮಾತ್ರ ಒಳಗೊಂಡಿರತಕ್ಕದ್ದು ಮತ್ತು ಅದು ವಾದಗಳಿಂದ ಹೊರತಾಗಿರತಕ್ಕದ್ದು.

(4) ಯಾವುದೇ ಒಂದು ಅಫಿಡವಿಟ್‌ನಲ್ಲಿರುವ ಹೇಳಿಕೆ ಅಂಶಗಳು ಹೇಳಿಕೆ ನೀಡುವವನ ಸ್ವಂತ ತಿಳುವಳಿಕೆಯೊಳಗಿಲ್ಲದೇ ಇದ್ದು ಆದರೆ ಅವರಿಂದ ಸ್ವೀಕೃತಗೊಂಡ ಮಾಹಿತಿಯನ್ನು ಆಧರಿಸಿದ್ದೇ ಆದಲ್ಲಿ, ಅದನ್ನು ಆ ರೀತಿ ತಿಳಿಸತಕ್ಕದ್ದು ಹಾಗೂ ಅದನ್ನೇ ಸತ್ಯವಾಗಿರುವುದೆಂದು ನಂಬಿರುವುದಾಗಿ ವ್ಯಕ್ತಪಡಿಸತಕ್ಕದ್ದು ಹಾಗೂ ಸಾಧ್ಯವಿದ್ದಲ್ಲಿ ಇಂತಹ ಮಾಹಿತಿಗಳ ಮೂಲವನ್ನು ನೀಡುವುದಲ್ಲದೇ ಅಂತಹ ನಂಬಿಕೆಗಳಿಗೆ ಆಧಾರವನ್ನು ಏನಾದರೂ ಇದ್ದಲ್ಲಿ, ನೀಡತಕ್ಕದ್ದು;

(5) ವಿಚಾರಣಾವಧಿಯ ಅರ್ಜಿಗಳೊಂದಿಗೆ ಅನುಬಂಧಗಳೇನಾದರೂ ದಾಖಲು ಮಾಡಲಾಗಿದ್ದಲ್ಲಿ, ಅವುಗಳನ್ನು ಪ್ರಮಾಣೀಕರಿಸತಕ್ಕದ್ದು.

(6) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ದಾಖಲು ಮಾಡಲು ಉದ್ದೇಶಿಸಿದ ಅಫೀಡವಿಟ್‌ಗಳು ಪ್ರಮಾಣೀಕರಿಸುವ ಅಧಿಕಾರಿಯ ಮುಂದೆ ಶಪಥವನ್ನು ಮಾಡತಕ್ಕದ್ದು ಮತ್ತು ಅದನ್ನು ಅವರು ದೃಢೀಕರಿಸತಕ್ಕದ್ದು.

**ಸೂಚನೆ:** ಯಾವೊಬ್ಬ ವ್ಯಕ್ತಿಯನ್ನು ಈ ನಿಯಮಗಳ ಅಡಿ ಈ ಉದ್ದೇಶಕ್ಕಾಗಿ ಯಾವುದೇ ಕಾನೂನಿನನ್ವಯ ಪ್ರಮಾಣ ವಚನವನ್ನು ಬೋಧನೆ ಮಾಡಲು ಪ್ರಾಧೀಕರಿಸಲ್ಪಟ್ಟಿರುತ್ತಾನೋ ಅವನನ್ನು ದೃಢೀಕರಿಸುವ ಅಧಿಕಾರಿಯೆಂದು ಪರಿಗಣಿಸತಕ್ಕದ್ದು.

14. **ಅಫೀಡವಿಟ್‌ನ್ನು ಸಲ್ಲಿಸುವ ಕಾರ್ಯ ವಿಧಾನ :**(1) ಹೇಳಿಕೆ ನೀಡುವವನು ಒಂದು ಅಫೀಡವಿಟ್‌ನಲ್ಲಿ ಪ್ರತಿಯೊಂದು ಹಾಳೆಯಡಿಯಲ್ಲಿ ಹಾಗೂ ಅಫೀಡವಿಟ್‌ನ ಕೊನೆಯಲ್ಲಿ ಸಹಿ ಅಥವಾ ಅವನ ಚಿಹ್ನೆ ನಮೂದಿಸಿರತಕ್ಕದ್ದು.

(2) ದೃಢೀಕರಿಸುವ ಅಧಿಕಾರಿಯು, ಪ್ರತಿಯೊಂದು ತಿದ್ದುಪಡಿ, ಮಾರ್ಪಾಡು ಅಥವಾ ಸಾಲುಗಳ ನಡುವೆ ಸೇರಿಸಿರುವುದನ್ನು ಅದರ ಪಕ್ಕದಲ್ಲಿ ಕಿರು ಸಹಿ ಹಾಕಿ ಅಧಿಕೃತಗೊಳಿಸತಕ್ಕದ್ದು ಹಾಗೂ ಪ್ರತಿಯೊಂದು ಹಾಳೆಯ ಅಡಿಯಲ್ಲಿ ಹೀಗೆ ಅಧಿಕೃತಗೊಳಿಸಿದ ತಿದ್ದುಪಡಿ ಮುಂತಾದವುಗಳ ಸಂಖ್ಯೆಯನ್ನು ನಮೂದಿಸತಕ್ಕದ್ದು ಅಥವಾ ಏನೂ ಇರದ ಪಕ್ಷದಲ್ಲಿ **"ಶೂನ್ಯ"** ಎಂದು ನಮೂದಿಸಿ ಇದಕ್ಕೆ ಕಿರು ಸಹಿಯನ್ನು ಮಾಡತಕ್ಕದ್ದು ಮತ್ತು ಅಫೀಡವಿಟ್‌ನ ಅಡಿಯಲ್ಲಿ ತನ್ನ ಹುದ್ದೆ, ದಿನಾಂಕವನ್ನು ನಮೂದಿಸಿ ಸಹಿ ಮಾಡಿ ತನ್ನ ಅಧಿಕೃತ ಮೊಹರು ಅಥವಾ ಕಛೇರಿಯ ಮೊಹರನ್ನು ಹಾಕಿರತಕ್ಕದ್ದು.

(3) ದೃಢೀಕರಿಸುವ ಅಧಿಕಾರಿಯು, ತನ್ನ ಸಮಕ್ಷಮದಲ್ಲಿ ಪ್ರಮಾಣ ವಚನವನ್ನು ವಿದ್ಯುಕ್ತವಾಗಿ ಮಾಡಿಸಿರುವ ಅಥವಾ ಸ್ಥಾಪಿಸಿರುವ ಅಂಶವನ್ನು ನಮೂದಿಸಿದ ತದನಂತರ ಸಹಿ ಹಾಕತಕ್ಕದ್ದು.

(4) ದೃಢೀಕರಿಸುವ ಅಧಿಕಾರಿಗೆ ಹೇಳಿಕೆ ನೀಡುವವನ ವೈಯುಕ್ತಿಕ ಪರಿಚಯವಿರದ ಪಕ್ಷದಲ್ಲಿ, ದೃಢೀಕರಿಸುವ ಅಧಿಕಾರಿಗೆ ಪರಿಚಯವಿರುವ ಓರ್ವ ವ್ಯಕ್ತಿಯಿಂದ ಪರಿಚಯಿಸಿಕೊಳ್ಳಲ್ಪಡತಕ್ಕದ್ದು ಮತ್ತು ಹಾಗೇ ಪರಿಚಯಿಸಿಕೊಂಡಿರುವ ಅಂಶವನ್ನು ಪ್ರತಿಯೊಂದು ಅಫೀಡವಿಟ್‌ನ ಕೊನೆಯಲ್ಲಿ ಪರಿಚಯಿಸಿದ ವ್ಯಕ್ತಿಯ ಹೆಸರು ಹಾಗೂ ವಿವರಣೆಯನ್ನು ನಮೂದಿಸತಕ್ಕದ್ದು. ಅಂತಹ ವ್ಯಕ್ತಿಯ ಸಹಿಯನ್ನು ದೃಢೀಕರಿಸತಕ್ಕದ್ದು. ದೃಢೀಕರಿಸುವ ಅಧಿಕಾರಿಗೆ ಹೇಳಿಕೆ ನೀಡುವವನು ಪರಿಚಯವಿಲ್ಲದ ಸಂದರ್ಭದಲ್ಲಿ, ಅಂತಹ ರೀತಿಯಲ್ಲಿ ಗುರಿತಿಸಿಕೊಳ್ಳಲು ಸಾಧ್ಯವಾಗದೇ ಇದ್ದಲ್ಲಿ, ಹೇಳಿಕೆ ನೀಡುವವನಎಡ ಹೆಬ್ಬೆಟ್ಟಿನ ಗುರುತನ್ನು ಅಫೀಡವಿಟ್‌ನ ಕೊನೆಯಲ್ಲಿ ಪಡೆದುಕೊಂಡು ಇದನ್ನು ದೃಢೀಕರಿಸುವ ಅಧಿಕಾರಿಯು ಈ ಹೆಬ್ಬೆಟ್ಟಿನ ಗುರುತನ್ನು ತನ್ನ ಸಮಕ್ಷಮದಲ್ಲಿ ಹಾಜರಾಗಿರುವ ಅಂತಹ ವ್ಯಕ್ತಿಯ ಎಡ ಹೆಬ್ಬೆಟ್ಟಿನ ಗುರತಾಗಿರತ್ತದೆಂದು ದೃಢಪಡಿಸತಕ್ಕದ್ದು.

(5) ಹೇಳಿಕೆದಾರರು ಅನಕ್ಷರಸ್ಥರಾಗಿದಲ್ಲಿ ಅಥವಾ ಅಂಧರಾಗಿದ್ದಲ್ಲಿ ಅಥವಾ ಅಫೀಡವಿಟ್‌ನಲ್ಲಿ ಮಾಡಿದ ಅಥವಾ ಬರೆದ ಭಾಷೆಯುಗೊತ್ತಿರದ ಪಕ್ಷದಲ್ಲಿ, ಅಂತಹ ಹೇಳಿಕೆದಾರರಿಗೆ ಅಫೀಡವಿಟ್‌ನ್ನು ದೃಢೀಕೃತ ಅಧಿಕಾರಿಯ ಸಮಕ್ಷಮದಲ್ಲಿ ಅವನಿಗೆ ಗೊತ್ತಿರುವ ಭಾಷೆಯಲ್ಲಿ ಓದಿ ವಿವರಿಸಿ ತಿಳಿಸತಕ್ಕದ್ದು ಹಾಗೂ ದೃಢೀಕೃತ ಅಧಿಕಾರಿಯು ಈ ವಿಚಾರವನ್ನು ಈ ರೀತಿ ತನ್ನ ಸಮಕ್ಷಮ ತಿಳಿಸಿರುವ ಬಗ್ಗೆ ಹಾಗೂ ಹೇಳಿಕೆದಾರನು ಅದನ್ನು ಅರ್ಥ ಮಾಡಿಕೊಂಡು ದೃಢೀಕೃತ ಅಧಿಕಾರಿಯ ಸಮಕ್ಷಮದಲ್ಲಿಯೇ ತನ್ನ ಸಹಿ ಮಾಡಿರುವನೆಂತಲೂ ಅಥವಾ ತನ್ನ ಗುರುತನ್ನು ಮಾಡಿರುವನೆಂತಲೂ ದೃಢೀಕರಿಸತಕ್ಕದ್ದು.

(6) ಅಫೀಡವಿಟ್‌ನಲ್ಲಿ ಉಲ್ಲೇಖಿಸಿದ ಮತ್ತು ಜೊತೆಗೆ ಸಲ್ಲಿಸಲಾಗಿದ್ದ ಯಾವುದೇ ದಾಖಲೆಗಳನ್ನು ದೃಢೀಕರಿಸುವ ಅಧಿಕಾರಿಯು, ಈ ಕೆಳಗೆ ನಮೂದಿಸಿರುವಂತೆ ಹಿಂಬರಹದೊಂದಿಗೆ ತನ್ನ ಸಹಿಯನ್ನು ಮಾಡತಕ್ಕದ್ದು.

"ಈ ದಿನ . . . . . . . . ರಂದು . . . . . . . . . . ಅಫೀಡವಿಟ್‌ನಲ್ಲಿ ದಾಖಲೆ ಪ್ರದರ್ಶಕ . . . . . ಎಂದು ಉಲ್ಲೇಖಿಸಿರುವ ಈ ದಾಖಲೆಗಳು ನನ್ನ ಸಮಕ್ಷಮದಲ್ಲಿ ಪ್ರಮಾಣೀಕರಿಸಲಾಗಿದೆ/ ಸ್ಥಿರಪಡಿಸಲಾಗಿದೆ."

15. **ನೋಟಿಸನ್ನು ಜಾರಿಗೊಳಿಸುವಿಕೆ:** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ದೂರುಗಳಿಗೆ ಸಂಬಂಧಿಸಿದಂತೆ ಪಕ್ಷಕಾರನಿಗೆ (ರಿಗೆ)/ ಪ್ರತಿವಾದಿ (ಗಳಿಗೆ) ನೋಟಿಸು ಜಾರಿಗೊಳಿಸಲು ನಿರ್ದೇಶಿಸಿದಲ್ಲಿ, ಅಂತಹ ನೋಟಿಸನ್ನು ಸಾಮಾನ್ಯವಾಗಿ 15 ದಿವಸಗಳ ಅವಧಿಗಾಗಿ ಅಥವಾ ಸಂದರ್ಭಗಳನ್ನು ಅವಲಂಬಿಸಿ 15 ದಿನಗಳಿಗಿಂತ ಕಡಿಮೆಯ ಅವಧಿಗಾಗಿ ಜಾರಿಗೊಳಿಸತಕ್ಕದ್ದು.

(2) ನೋಟಿಸು ನೀಡಲು 15 ದಿನಗಳ ಗಡುವನ್ನು ನೀಡುವ ಕುರಿತಂತೆ ಅನುಮಾನಗಳು ಉದ್ಭವಿಸುವ ಸಂದರ್ಭಗಳಿದ್ದಾಗ ಅದನ್ನು ಅಗತ್ಯಪಡಿಸತಕ್ಕದ್ದು.

(3) ನೋಟಿಸಿನೊಂದಿಗೆ ದಾಖಲಾಗಿರುವ ದೂರಿನ ಪ್ರತಿಗಳು, ಅರ್ಜಿಗಳನ್ನು ಆಧರಿಸಿದ ನಿವೇದನೆ ಪತ್ರಗಳು ಹಾಗೂ ಇನ್ನಿತರೆ ದಾಖಲೆಗಳನ್ನು ಎದುರು ಪಕ್ಷಕಾರ (ರು)/ ಪ್ರತಿವಾದಿ (ಗಳಿಗೆ) ಜಾರಿಗೊಳಿಸತಕ್ಕದ್ದು.

(4) ಎದುರು ಪಕ್ಷಕಾರ(ರು)/ ಪ್ರತಿವಾದಿ (ಗಳು) ಹಾಜರಾದ ತರುವಾಯ, ಯಾವುದೇ ಅರ್ಜಿ ಅಥವಾ ದಾಖಲೆಗಳನ್ನು ರಾಜ್ಯ ಚುನಾವಣಾ ಆಯೋಗದಿಂದ ಸ್ವೀಕರಿಸತಕ್ಕದ್ದಲ್ಲ. ಎದುರು ಪಕ್ಷದ ಪಕ್ಷಗಾರರಿಗೆ ಅದರ ಒಂದು ಪ್ರತಿಯನ್ನು ಜಾರಿಗೊಳಿಸಲಾಗಿದೆ ಎಂಬ ಹಿಂಬರಹವನ್ನು ಹೊಂದಿಲ್ಲದೆ ಇದ್ದಲ್ಲಿ ಸ್ವೀಕರಿಸತಕ್ಕದ್ದಲ್ಲ.

16. **ಪಕ್ಷಗಾರರ ಹಾಜರಾತಿ ಹಾಗೂ ಹಾಜರಾಗದೇ ಇರುವುದರ ಪರಿಣಾಮಗಳು :-** (1) ಪ್ರಕರಣದ ವಿಚಾರಣೆಯ ದಿನಾಂಕದಂದು ಅಥವಾ ವಿಚಾರಣೆಯನ್ನು ಮುಂದೂಡಲ್ಪಡಬಹುದಾದ ಯಾವುದೇ ದಿನಾಂಕದಂದು, ಪ್ರಕರಣವನ್ನು ವಿಚಾರಣೆಗಾಗಿ ಕರೆದಾಗ ಅರ್ಜಿದಾರನು ಸ್ವತಃ ಅಥವಾ ವಕೀಲರ ಮೂಲಕವಾಗಲೀ ವಿಚಾರಣೆಗೆ ಹಾಜರಾಗದೇ ಇದ್ದ ಪಕ್ಷದಲ್ಲಿ, ರಾಜ್ಯ ಚುನಾವಣಾ ಆಯುಕ್ತರು, ಈ ತಪ್ಪಿಗಾಗಿ ಅರ್ಜಿಯನ್ನು ಅಥವಾ ಸಂದರ್ಭಾನುಸಾರವಾಗಿ ಅಪೀಲೆಂದು ಭಾವಿಸಲಾದದ್ದನ್ನು ವಜಾ ಮಾಡಬಹುದು.

(2) ಪ್ರಕರಣದ ವಿಚಾರಣೆಯ ದಿನಾಂಕದಂದು ಅಥವಾ ವಿಚಾರಣೆ ದಿನಾಂಕವು ಮುಂದೂಡಲ್ಪಡಬಹುದಾದ ಯಾವುದೇ ದಿನಾಂಕದಂದು ಪ್ರಕರಣವನ್ನು ವಿಚಾರಣೆಗೆ ಕರೆದಾಗ ಪ್ರತಿವಾದಿ ಸ್ವತಹವಾಗಲೀ ಅಥವಾ ವಕೀಲರ ಮೂಲಕವಾಗಲೀ ಹಾಜರಾಗದೇ ಇದ್ದ ಪಕ್ಷದಲ್ಲಿ, ರಾಜ್ಯ ಚುನಾವಣಾ ಆಯುಕ್ತರು ಅರ್ಜಿದಾರ ಅಥವಾ ಅವನ ವಕೀಲನ ಅಹವಾಲನ್ನು ಕೇಳಿದ ತರುವಾಯ ಇಂತಹ ಪ್ರಕರಣಗಳು ಕುರಿತಂತೆ ಯೋಗ್ಯತಾನುಸಾರ ನಿರ್ಣಯಿಸಿ ನಿರ್ಧಾರ ತೆಗೆದುಕೊಳ್ಳಬಹುದು.

(3) ಯಾವುದೇ ಪ್ರಕರಣವು ತಪ್ಪಿಗಾಗಿ ವಜಾ ಮಾಡಲ್ಪಟ್ಟಾಗ, ಅರ್ಜಿದಾರನು ಆದೇಶ ಹೊರಡಿಸಿದ 30 ದಿನಗಳೊಳಗಾಗಿ ಬೇರೊಂದು ಸಂಕೀರ್ಣ ಅರ್ಜಿಯನ್ನು ಒಂದು ಅಫೀಡವಿಟ್‌ನೊಂದಿಗೆ ರಾಜ್ಯ ಚುನಾವಣಾ ಆಯೋಗಕ್ಕೆ ಸಲ್ಲಿಸಬಹುದು ಮತ್ತು ಪ್ರಕರಣವನ್ನು ವಿಚಾರಣೆಗೆ ಕರೆದ ದಿನದಂದು ಅವನ ಹಾಜರಾತಿಯು ಸಕಾರಣಕ್ಕಾಗಿ ತಡೆ ಉಂಟಾಗಿದೆಯೆಂದು ಸಾಕ್ಷ್ಯಾಧಾರಗಳಿಂದ ರುಜುವಾತುಪಡಿಸಿದಲ್ಲಿ, ರಾಜ್ಯ ಚುನಾವಣಾ ಆಯುಕ್ತರು, ಪ್ರಕರಣದ ವೆಚ್ಚಕ್ಕೆ ಸಂಬಂಧಿಸಿದಂತೆ ಅಂತಹ ನಿಬಂಧನೆಗೊಳಪಟ್ಟು ಪ್ರಕರಣಗಳನ್ನು ಪೂರ್ವಸ್ಥಿತಿಗೆ ತರಬಹುದು ಅಥವಾ ತಾನು ಸೂಕ್ತವೆಂದು ಭಾವಿಸಿದಂತೆ ತೀರ್ಮಾನಿಸಬಹುದು

ಪರಂತು, ಒಂದು ವೇಳೆ ಪ್ರಕರಣದಲ್ಲಿ ಪ್ರತಿವಾದಿಯು ಈಗಾಗಲೇ ಹಾಜರಾಗಿದ್ದಲ್ಲಿ ಪೂರ್ವಸ್ಥಿತಿಗೆ ತರುವ ಮೊದಲು ಪ್ರತಿವಾದಿಗೆ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡತಕ್ಕದ್ದು:

ಮತ್ತು ಪರಂತು, ಅರ್ಜಿದಾರನು ಸಕಾಲದಲ್ಲಿ ಅರ್ಜಿಯನ್ನು ಸಲ್ಲಿಸದೇ ಇರುವುದಕ್ಕೆ ಸಾಕಷ್ಟು ಕಾರಣವುಳ್ಳವನಾಗಿದ್ದಾನೆಂದು ರಾಜ್ಯ ಚುನಾವಣಾ ಆಯುಕ್ತರು ಮನಗಂಡರೆ, ಈ ಹಿಂದೆ ಹೇಳಿದ 60 ದಿನಗಳ ಅವಧಿ ಮುಗಿದ ನಂತರದ ದಿನಾಂಕದಿಂದ 30 ದಿನಗಳ ಅವಧಿಯೊಳಗೆ ಅರ್ಜಿಯನ್ನು ಸಲ್ಲಿಸಿದಾಗ ಅಂತಹ ಅರ್ಜಿಯನ್ನು ಪರಿಶೀಲನೆಗೆ ಸ್ವೀಕರಿಸಬಹುದು.

(4) ಒಂದು ಪ್ರಕರಣವು ಏಕಪಕ್ಷೀಯವಾಗಿ ವಿಚಾರಣೆಯಾಗಿದ್ದು, (2)ನೇ ಉಪ ನಿಯಮದ ಅಡಿಯಲ್ಲಿ ಪ್ರತಿವಾದಿ/ ಗಳಿಗೆ ವಿರುದ್ಧವಾಗಿ ಆದೇಶವನ್ನು ಘೋಷಿಸಲ್ಪಟ್ಟಿದ್ದರೆ, ಆ ಆದೇಶದ ದಿನಾಂಕದಿಂದ 30 ದಿನಗಳೊಳಗಾಗಿ ಒಂದು ಅಫೀಡವಿಟಿನ ಜೊತೆಗೆ ಪ್ರತಿವಾದಿಯು ರಾಜ್ಯ ಚುನಾವಣಾ ಆಯೋಗಕ್ಕೆ ಒಂದು ಸಂಕೀರ್ಣ ಅರ್ಜಿಯನ್ನು ಸಲ್ಲಿಸಬಹುದು ಮತ್ತು ನೋಟಿಸು ಜಾರಿಯಾಗಿರುವುದಿಲ್ಲವೆಂತಲೂ ಅಥವಾ ಪ್ರಕರಣವನ್ನು ವಿಚಾರಣೆಗೆ ಕರೆದಾಗ ಹಾಜರಾಗಲು ಅವನು ಸಾಕಷ್ಟು ಕಾರಣಗಳಿಂದಾಗಿ ತಡೆಹಿಡಿಯಲ್ಪಟ್ಟಿದ್ದನೆಂತಲೂ ರಾಜ್ಯ ಚುನಾವಣಾ ಆಯುಕ್ತರಿಗೆ ಪ್ರತಿವಾದಿಯು ಮನವರಿಕೆ ಮಾಡಿದಲ್ಲಿ, ರಾಜ್ಯ ಚುನಾವಣಾ ಆಯುಕ್ತರು, ಅರ್ಜಿದಾರನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡಿ ಪ್ರಕರಣದ ವೆಚ್ಚಕ್ಕೆ ಸಂಬಂಧಿಸಿದಂತೆ ಅಂತಹ ನಿಬಂಧನೆಗೊಳಪಟ್ಟು ಅಥವಾ ತಾನು ಸೂಕ್ತವೆಂದು ಭಾವಿಸಿದಂತೆ ಪ್ರಕರಣವನ್ನು ಪುನರ್ ವಿಚಾರಣೆ ಮಾಡಬಹುದು.

ಮತ್ತು ಪರಂತು, ಅರ್ಜಿದಾರನು ಸಕಾಲದಲ್ಲಿ ಅರ್ಜಿಯನ್ನು ಸಲ್ಲಿಸದೇ ಇರುವುದಕ್ಕೆ ಸಾಕಷ್ಟು ಕಾರಣವುಳ್ಳವನಾಗಿದ್ದಾನೆಂದು ರಾಜ್ಯ ಚುನಾವಣಾ ಆಯುಕ್ತರು ಮನಗಂಡರೆ, ಈ ಹಿಂದೆ ಹೇಳಿದ 60 ದಿನಗಳ ಅವಧಿ ಮುಗಿದ ನಂತರದ ದಿನಾಂಕದಿಂದ 30 ದಿನಗಳ ಅವಧಿಯೊಳಗೆ ಅರ್ಜಿಯನ್ನು ಸಲ್ಲಿಸಿದಾಗ ಅಂತಹ ಅರ್ಜಿಯನ್ನು ಪರಿಶೀಲನೆಗೆ ಸ್ವೀಕರಿಸಬಹುದು

(5) ರಾಜ್ಯ ಚುನಾವಣಾ ಆಯೋಗದಿಂದ ಮುಂದಿರುವ ವ್ಯವಹರಣೆಗಳಿಗೆ ಕಾಲಪರಿಮಿತಿ ಅಧಿನಿಯಮ, 1963 ರ ಉಪಬಂಧಗಳು ಅನ್ವಯಿಸುವುದಿಲ್ಲ.

17. **ಮುಂದೂಡುವಿಕೆ :** (1) ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಮುಂದಿರುವ ಪ್ರತಿಯೊಂದು ವ್ಯವಹರಣೆಗಳನ್ನು ಸಾಧ್ಯವಾದಷ್ಟು ಬೇಗನೆ ಮತ್ತು ಅಧಿನಿಯಮದಲ್ಲಿ ಅಗತ್ಯಪಡಿಸಿದಂತೆ ನಡೆಸತಕ್ಕದ್ದು.

(2) ಕರ್ನಾಟಕ ರಾಜ್ಯ ಚುನಾವಣಾ ಆಯೋಗವು, ತನ್ನಿಂದ ಯಾವುದೇ ವಿಚಾರಣೆಯು ಮುಂದೂಡುವಿಕೆಯಾದಲ್ಲಿ ಅದಕ್ಕೆ ಕಾರಣಗಳನ್ನು ದಾಖಲಿಸತಕ್ಕದ್ದು.

(3) ದೂರುದಾರರು ಅಥವಾ ಸಂದರ್ಭಾನುಸಾರವಾಗಿ ಅರ್ಜಿದಾರರು ಸಕಾರಣ ನೀಡಿರದ ಹೊರತು ಪ್ರಕರಣದ ಮುಂದೂಡಿಕೆಗಾಗಿ ಬೇಡಿಕೆ ಸಲ್ಲಿಸಿದರೆ ವೆಚ್ಚದ ಹೊರೆಯನ್ನು ಭರಿಸಲು ಹೊಣೆಗಾರರಾಗಿರತಕ್ಕದ್ದು:

ಪರಂತು, ಒಂದು ನಿರ್ದಿಷ್ಟ ಪ್ರಕರಣದಲ್ಲಿ ಪರಿಸ್ಥಿತಿಗನುಸಾರವಾಗಿ ನಿಯಮಗಳಂತೆ ಅರ್ಹವಿರುವ ಪ್ರಯಾಣದ ಭತ್ಯೆ ಹಾಗೂ ದಿನಭತ್ಯೆಯ ನಿಜವಾದ ವೆಚ್ಚವನ್ನು ಆದರೆ ಯಾವುದೇ ಸಂದರ್ಭದಲ್ಲಿ ನೂರು ರೂಪಾಯಿಗಳಿಗಿಂತಲೂ ಕಡಿಮೆಯಿರದ ಮೊತ್ತದಷ್ಟು ಮೊತ್ತವನ್ನು ವೆಚ್ಚವೆಂದು ವಿಧಿಸಬಹುದಾಗಿರುತ್ತದೆ.

(4) ವಿಧಿಸಲಾದ ವೆಚ್ಚದ ಮೊತ್ತವನ್ನು ಪಕ್ಷಗಾರ ಅಥವಾ ಪಕ್ಷಗಾರರಿಗೆ ಅವನ ಅಥವಾ ಅವರ ವೆಚ್ಚವನ್ನು ಭರಿಸಲು ನೀಡಬಹುದು ಅಥವಾ ರಾಜ್ಯ ಸರ್ಕಾರದ ಸ್ವೀಕೃತಿ ಶೀರ್ಷಿಕೆಯಲ್ಲಿ ಜಮಾ ಮಾಡತಕ್ಕದ್ದು.

(5) ವೆಚ್ಚವನ್ನು ನಿಗದಿಪಡಿಸದೇ ಯಾವುದೇ ಮುಂದೂಡುವಿಕೆಯನ್ನು ಮಂಜೂರು ಮಾಡಲಾಗಿದ್ದರೆ, ಆದೇಶದ ಹಾಳೆಯಲ್ಲಿ ಈ ಕಾರಣ ನಮೂದಿಸಿರತಕ್ಕದ್ದು.

(6) ಪ್ರಕರಣದ ಮುಂದೂಡುವಿಕೆಯ ಎಲ್ಲಾ ಆದೇಶಗಳು ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಆಯುಕ್ತರಿಂದ ಸಹಿ ಮಾಡಲ್ಪಟ್ಟಿರತಕ್ಕದ್ದು.

(7) ಪಕ್ಷಗಾರರ/ ರನ್ನು ಪ್ರತಿನಿಧಿಸುವ ವಕೀಲರ ಗೈರು ಹಾಜರಿ ವಕೀಲರ ಹಿಡಿತಕ್ಕೆ ಮೀರಿದ (ಅಂದರೆ) ಅವರ ಅನಾರೋಗ್ಯ ಅಥವಾ ಕುಟುಂಬದಲ್ಲಿಯ ಅಗಲಿಕೆಯ ಕಾರಣಕ್ಕಾಗಿ ಮಾತ್ರವಲ್ಲದ ಹೊರತು, ವಕೀಲರು ಲಭ್ಯವಿಲ್ಲವೆಂಬ ಕಾರಣವು ಪ್ರಕರಣದ ಮುಂದೂಡಿಕೆ ಮಾಡಲು ಕಾರಣವಾಗಿರತಕ್ಕದ್ದಲ್ಲ.

18. **ವಾದಗಳು :** (1) ವಿವಾದಾಂಶಕ್ಕೆ ಸಂಬಂಧಿಸಿದ ವಾದಗಳು ವಿಷಯಕ್ಕೆ ಸಂಬಂಧಿಸಿದಂತೆ ಎಷ್ಟು ಸಾಧ್ಯವೋ ಅಷ್ಟು ಸಂಕ್ಷಿಪ್ತವಾಗಿರತಕ್ಕದ್ದು.

(2) ಒಬ್ಬ ಪಕ್ಷಗಾರನು ವಕೀಲನಿಂದ ಪ್ರತಿನಿಧಿಸಲ್ಪಡುತ್ತಿದ್ದಲ್ಲಿ, ವಿಷಯವನ್ನು ವಾದಗಳಿಗೆ ನಿಗದಿಪಡಿಸಿದ ಎರಡು ದಿನಗಳ ಮೊದಲು ಒಂದು ಸಂಕ್ಷಿಪ್ತ ಲಿಖಿತ ವಾದವನ್ನು ದಾಖಲಿಸುವುದು ಕಡ್ಡಾಯವಾಗಿರತಕ್ಕದ್ದು.

(3) ಸಂಕ್ಷಿಪ್ತ ಲಿಖಿತ ವಾದಗಳನ್ನು ದಾಖಲು ಮಾಡಲು ತಪ್ಪಿದರೆ, ಮುಂದೂಡುವಿಕೆ ಮಂಜೂರು ಮಾಡಲು ಯಾವ ವೆಚ್ಚವನ್ನು ವಿಧಿಸಲಾಗುವುದೋ ಅದೇ ದರದಲ್ಲಿರುವ ವೆಚ್ಚವನ್ನು ವಿಧಿಸತಕ್ಕದ್ದು.

19. **ಏಕಪಕ್ಷೀಯ ಮಧ್ಯಂತರ ಆದೇಶ:–** ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಹೊರಡಿಸಿದ ಯಾವುದೇ ಏಕಪಕ್ಷೀಯ ಮಧ್ಯಂತರ ಆದೇಶವು ಏತನ್ಮಧ್ಯೆ ಮಧ್ಯಂತರ ಆದೇಶಕ್ಕೆ ಬಂದ ಆಕ್ಷೇಪಣೆಗಳ ವಿಚಾರಣೆ ಹಾಗೂ ವಿಲೇಯಾಗದೇ ಇದ್ದಲ್ಲಿ 45 ದಿನಗಳ ತರುವಾಯ ರದ್ದಾಗತಕ್ಕದ್ದು.

20. ನ್ಯಾಯಾಲಯದ ಡೈರಿ ಹಾಗೂ ರಿಜಿಸ್ಟರುಗಳ ನಿರ್ವಹಣೆ :– (1) (i) ನ್ಯಾಯಾಲಯದ ಅಧಿಕಾರಿಯು, ಪ್ರಕರಣದ ಮುಂದೂಡಿಕೆಯಾಗಿದೆಯೇ ಅಥವಾ ಭಾಗಶಃ ವಿಚಾರಣೆಯಾಗಿದೆಯೇ ಅಥವಾ ವಿಚಾರಣೆಯಾಗಿ ವಿಲೇಯಾಗಿದೆಯೇ? ಅಥವಾ ಸಂದರ್ಭಾನುಸಾರವಾಗಿ ವಿಚಾರಣೆಯಾಗಿದ್ದು ಆದೇಶಕ್ಕಾಗಿ ಕಾದಿರಿಸಲಾಗಿದೆಯೇ ಎನ್ನುವ ಬಗ್ಗೆ ಸಂಕ್ಷಿಪ್ತ ದಾಖಲೆಗಳನ್ನೊಳಗೊಂಡಂತೆ ಸ್ಪಷ್ಟವಾಗಿ ಓದಲು ಬರುವಂತೆ ರಿಜಿಸ್ಟರ್‌ವೊಂದರಲ್ಲಿ ನ್ಯಾಯಾಲಯದ ಡೈರಿಯಲ್ಲಿ ನಮೂದಿಸಿರತಕ್ಕದ್ದು ಮತ್ತು ಅವನಿಂದ ಅದಕ್ಕೆ ಸಹಿ ಹಾಕತಕ್ಕದ್ದು.

(ii) ಕಛೇರಿ ವೇಳೆಯಲ್ಲಿ ನ್ಯಾಯಾಲಯದ ಡೈರಿಯು ಸಾರ್ವಜನಿಕರ ಪರಿವೀಕ್ಷಣೆಗೆ ಮುಕ್ತವಾಗಿರತಕ್ಕದ್ದು.

(2) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ತೀರ್ಪು/ ಆದೇಶವು ಘೋಷಿಸಿದ ತರುವಾಯ ಅರ್ಜಿಯು ವಿಲೇಗೊಂಡಿರುವ ಬಗ್ಗೆ ಸಂಬಂಧಪಟ್ಟ ನ್ಯಾಯಾಲಯದ ಅಧಿಕಾರಿಯು ರಿಜಿಸ್ಟರಿನಲ್ಲಿ ನಮೂದು ಮಾಡಾತಕ್ಕದ್ದು.

21. **ವೆಚ್ಚಗಳು :** ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಅನ್ಯಥಾ ಆದೇಶಿಸಿದ ಹೊರತು, ವೆಚ್ಚಗಳು

ಎಂದರೆ:–

ಎ) (i) ವಕಾಲತ್ತುಗಳಿಗೆ;

(ii) ವಕಾಲತ್ತಿನೊಂದಿಗೆ ಹಾಜರುಪಡಿಸತಕ್ಕ ಮತ್ತು ಪಕ್ಷಗಾರರಿಂದ ಹಾಜರುಪಡಿಸಿದ ದಾಖಲೆಗಳಿಗೆ;

(iii) ಪಕ್ಷಗಾರರ ಪರವಾಗಿ ದಾಖಲು ಮಾಡುವ ವಕಾಲತ್ತುಗಳಿಗೆ (ಒಬ್ಬ ಪಕ್ಷಗಾರನ ಪರವಾಗಿ ಒಂದಕ್ಕಿಂತಲೂ ಹೆಚ್ಚಿನ ವಕಾಲತ್ತುಗಳು ದಾಖಲೆಗೊಂಡಿದ್ದರೆ ಒಂದು ವಕಾಲತ್ತಿನ ಬಗ್ಗೆ ಮಾತ್ರ ನ್ಯಾಯಾಲಯದ ಶುಲ್ಕವನ್ನು ಸಲ್ಲಿಸಿದ್ದರೆ);

(iv) ಪಕ್ಷಗಾರನ ಸೂಚನೆಯ ಮೇರೆಗೆ ಕೈಗೊಂಡ ಕಾನೂನು ಕ್ರಮಕ್ಕೆ;

(v) ಪಕ್ಷಗಾರನಿಂದ ದಾಖಲು ಮಾಡಲ್ಪಟ್ಟ ದೃಢೀಕರಿಸಿದ ಪ್ರತಿಗಳು ಮತ್ತು ಯಾವುದು ವ್ಯಾಜ್ಯಗಳು ತೀರ್ಪು ನೀಡಿಕೆಗೆ ಅಗತ್ಯವಾಗಿರುತ್ತದೋ ಅಂತಹುವುಗಳಿಗೆ,

–ಪಾವತಿಸಲಾದ ನ್ಯಾಯಾಲಯದ ಶುಲ್ಕ,

(ಬಿ) ದೃಢೀಕೃತ ಪ್ರತಿಗಳನ್ನು ಪಡೆಯುವ ವೆಚ್ಚ,

(ಸಿ) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ಸಾಕ್ಷ್ಯಾಧಾರಗಳನ್ನು ನೀಡಲು ಹಾಜರಾದ ಅವನ ಸಾಕ್ಷಿದಾರರಿಗೆ ಪಕ್ಷಗಾರನು ಪಾವತಿಸಬೇಕಾದ ಬಾಟಾ;

(ಡಿ) ವ್ಯಾಜ್ಯ ಕಾರಣಕ್ಕಾಗಿ ವೆಚ್ಚವೆಂದು ಪರಿಗಣಿಸಲಾದ ವಿಚಾರಣಾವಧಿ ಪ್ರಕರಣಗಳಲ್ಲಿಯ ವೆಚ್ಚ;

(ಇ) ವಕೀಲನು ಸ್ವೀಕರಿಸಲಾದ ಶುಲ್ಕವನ್ನು ಮೆಮೋದಲ್ಲಿ ನಮೂದಿಸಿಲ್ಲದಿದ್ದರೆ ಅವನ ವಕೀಲನಿಗೆ ಅವನಿಂದ ವಾಸ್ತವವಾಗಿ ಪಾವತಿಸಲಾದ ಶುಲ್ಕ;

(ಎಫ್) ವಕಾಲತ್ತುಗಳ ಬೆರಳಚ್ಚಿಗಾಗಿ ಮತ್ತು ಮುದ್ರಣಕ್ಕಾಗಿ ಪಕ್ಷಗಾರನಿಂದ ಭರಿಸಲಾದ ವೆಚ್ಚ;

(ಜಿ) ದಾಖಲೆಗಳನ್ನು ಪರಿವೀಕ್ಷಣೆ ಮಾಡಿದುದಕ್ಕೆ ಪ್ರಾಧಿಕಾರದಿಂದ ಸಂದಾಯ ಮಾಡಲಾದ ವೆಚ್ಚ;

(ಹೆಚ್) ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಹಾಜರಾಗಬೇಕೆಂಬ ಆಜ್ಞೆ, ನೀಡದಿದ್ದಾಗ್ಯೂ ಸಾಕ್ಷಿದಾರರನ್ನು ಹಾಜರುಪಡಿಸುವುದಕ್ಕಾಗಿ ಪಕ್ಷಗಾರನು ಭರಿಸಿದ ವೆಚ್ಚ;

(ಐ) ನ್ಯಾಯ ನಿಂದನೆಯ ಯಾವುದೇ ಅರ್ಜಿಗಳನ್ನೊಳಗೊಂಡಂತೆ, ಅರ್ಜಿ ಹೂಡುವ ಮುನ್ನ, ಕಾನೂನಿನ ಅನ್ವಯ ನೀಡಬೇಕೆಂಬ ಅಗತ್ಯವಿಲ್ಲದಿದ್ದರೂ, ಅರ್ಜಿಗೆ ಸಂಬಂಧಿಸಿದಂತೆ ಯಾವುದೇ ಪಕ್ಷಗಾರನು ನೋಟಿಸನ್ನು ಜಾರಿಗೊಳಿಸಲು ಅಗತ್ಯವಿಲ್ಲದಿದ್ದರೂ, ಅರ್ಜಿಗೆ ಸಂಬಂಧಿಸಿದಂತೆ ಯಾವುದೇ ಪಕ್ಷಗಾನು ನೋಟಿಸನ್ನು ಜಾರಿಗೊಳಿಸಲು ಭರಿಸಿದ ವೆಚ್ಚ, ಯಾವುದಾದರೂ ಇದ್ದಲ್ಲಿ, ಅದನ್ನೂ ಒಳಗೊಂಡ ವೆಚ್ಚ.

–ಇವುಗಳನ್ನು ಒಳಗೊಂಡಿರತಕ್ಕದ್ದು.

(2) (i)ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ವಕೀಲರು ಶುಲ್ಕವನ್ನು ನಿಗದಿಪಡಿಸಿರದಿದ್ದರೆ ಮತ್ತು ಸ್ವೀಕೃತಗೊಂಡ ಶುಲ್ಕದ ಮೊತ್ತದ ತಃಖ್ತೆಯನ್ನು ದಾಖಲು ಮಾಡಿರದಿದ್ದರೆ ಅಂತಹ ಪ್ರತಿಯೊಂದು ಪ್ರಕರಣಕ್ಕೂ ಗರಿಷ್ಠ ಮೊತ್ತ ರೂ.250/– ಶುಲ್ಕವಾಗಿರತಕ್ಕದ್ದು.

(ii)ಅರ್ಜಿಗಳನ್ನು ಗುಂಪಾಗಿ ವಿಚಾರಣೆ ಮಾಡಲಾಗಿದ್ದು, ಇತ್ಯರ್ಥವಾಗಿದ್ದ ಪಕ್ಷದಲ್ಲಿ ಒಬ್ಬರೇ ವಕೀಲರು ಹಾಜರಾಗಿದ್ದಲ್ಲಿ ಎಲ್ಲಾ ಪ್ರಕರಣಗಳಿಗೆ ಸೇರಿ ಗರಿಷ್ಠ ಸಂಚಿತ ಶುಲ್ಕವಾಗಿ ರೂ.1000/– ಮಾತ್ರ ಅನುಮತಿಸತಕ್ಕದ್ದು.

(iii) ಯಾವುದೇ ಪ್ರಕರಣದಲ್ಲಿ ಹಿರಿಯ ವಕೀಲರೊಂದಿಗೆ ಕಿರಿಯ ವಕೀಲರು ಹಾಜರಾದರೆ, ಅಂತಹ ಪ್ರಕರಣದ ಸನ್ನಿವೇಶಗಳನ್ನಾಧರಿಸಿನಿಗದಿಪಡಿಸಿರುವ ಶುಲ್ಕದ ಮೊತ್ತದ 1/4ನೇ ಭಾಗವನ್ನು ಕಿರಿಯ ವಕೀಲರ ಶುಲ್ಕವೆಂದು ಸೇರಿಸತಕ್ಕದ್ದು.

(3) (i) ಅರ್ಜಿ ಅಥವಾ ಸಂದರ್ಭಾನುಸಾರವಾಗಿ ಅರ್ಜಿಗಳು ವಿಲೇಗೊಂಡ ದಿನಾಂಕದಿಂದ ಏಳು ದಿನಗಳೊಳಗಾಗಿ, ವಕೀಲರು ಶುಲ್ಕ ಪ್ರಮಾಣ ಪತ್ರವನ್ನು ಒಪ್ಪಿಸಿದಾಗ ಮಾತ್ರ ವಕೀಲರ ಶುಲ್ಕವನ್ನು ವೆಚ್ಚದಲ್ಲಿ ಸೇರಿಸತಕ್ಕದ್ದು.

(2) ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ವೆಚ್ಚಗಳ ಆದೇಶಗಳನ್ನು ಹೊರಡಿಸಿದಾಗಲೆಲ್ಲ, ತೀರ್ಪನ್ನು/ ಆದೇಶವನ್ನು ನೀಡಿದ ದಿನಾಂಕದಂದು 10 ದಿನಗಳೊಳಗಾಗಿ ವೆಚ್ಚದ ನಿವೇದನ ಪತ್ರವನ್ನು ತಯಾರಿಸತಕ್ಕದ್ದು ಮತ್ತು ಆಯೋಗದ ಕಾರ್ಯದರ್ಶಿಯು ಅಥವಾ ಅವರಿಂದ ಅಧಿಕಾರ ಹೊಂದಿರುವ ಇನ್ನಿತರ ಯಾವೊಬ್ಬ ಅಧಿಕಾರಿಯು ಸಹಿ ಮಾಡಿರತಕ್ಕದ್ದು.

(3) ಪ್ರತಿವಾದಿಗಳು ನೀಡಿದ ಯಾವುದಾದರೂ ದಾಖಲೆಗಳನ್ನು ರದ್ದುಪಡಿಸುವ ಸಂಬಂಧದಲ್ಲಿ ಯಾವುದೇ ನಿರ್ದಿಷ್ಟ ನಿರ್ದೇಶನ ನೀಡಿ ತೀರ್ಪು ಆದೇಶಗಳನ್ನು ಹೊರಡಿಸಿದಲ್ಲಿ ತೀರ್ಪು/ ಆದೇಶದ ಪ್ರತಿಯೊಂದಿಗೆ ಒಂದು ಆದೇಶವನ್ನು ಹೊರಡಿಸತಕ್ಕದ್ದು ಮತ್ತು ಅಂತಹ ಆದೇಶವನ್ನು ಕಾರ್ಯದರ್ಶಿ ಅಥವಾ ಅವರಿಂದ ಅಧಿಕಾರ ಹೊಂದಿದ ಇನ್ನಿತರ ಯಾವೊಬ್ಬ ಅಧಿಕಾರಿಯು ಸಹಿ ಮಾಡಿರತಕ್ಕದ್ದು.

**22. ಅಂತಿಮ ಆದೇಶ:** (1) ಪ್ರತಿಯೊಂದು ಆದೇಶದಲ್ಲಿನ ಬಲ ಭಾಗದ ಮೇಲಿನ ಮೂಲೆಯಲ್ಲಿ ದೂರನ್ನು ಸಲ್ಲಿಸಿದ ಹಾಗೂ ಆದೇಶ ಹೊರಡಿಸಿದ ದಿನಾಂಕವನ್ನು ಸೂಚಿಸತಕ್ಕದ್ದು.

(2) ಆದೇಶದ ವ್ಯಾಜ್ಯ ಕಾರಣ ಶಿರೋನಾಮೆಯು ಎಲ್ಲಾ ಪಕ್ಷಕಾರರ ಹೆಸರು ಹಾಗೂ ವಿಳಾಸವನ್ನೊಳಗೊಂಡಿರತಕ್ಕದ್ದು.

(3) ಆದೇಶದ ಒಳಭಾಗದಲ್ಲಿ, ದೂರುದಾರನ ಅಥವಾ ಎದುರುದಾರನ ಹೆಸರನ್ನು ನಮೂದಿಸಿದ ನಂತರ, ಅವರ ಹೆಸರನ್ನು ಶಿರೋನಾಮೆಯಲ್ಲಿ ತೋರಿಸಿರುವ ರೀತ್ಯಾ ನಮೂದಿಸುವುದು ಹಾಗೂ ತದನಂತರ ಪಕ್ಷಗಾರರನ್ನು, ದೂರುದಾರ ಅಥವಾ ಎದುರುದಾರ ಪಕ್ಷಗಾರ ನಂ.1 ಅಥವಾ ಪಕ್ಷಗಾರ ನಂ.2 ಇತ್ಯಾದಿಯೆಂದು ನಮೂದಿಸತಕ್ಕದ್ದಲ್ಲ.

(4) ವಿಷಯ ಇತ್ಯರ್ಥಗೊಳಿಸಿದ ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಆದೇಶವು ಎಷ್ಟು ಸಾಧ್ಯವೋ ಅಷ್ಟು ಸಂಕ್ಷಿಪ್ತವಾಗಿ ಹಾಗೂ ನಿಖರವಾಗಿರತಕ್ಕದ್ದು.

(5) ಪಕ್ಷಗಾರರಿಗೆ ಅದೇಶದ ಒಂದು ಪ್ರತಿಯನ್ನು ಕಳುಹಿಸಿದಾಗ, ಅದನ್ನು ಯಾವ ವಿಧದಲ್ಲಿ ಹಾಗೂ ಯಾವ ದಿನಾಂಕದಂದು ಕಳಿಸಲಾಗಿದೆಯೆಂಬ ವಿವರಗಳನ್ನು ಆದೇಶದ ಕೊನೆಯ ಪುಟದಲ್ಲಿ ಮುದ್ರಿಸತಕ್ಕದ್ದು.

(6) ವಾದಗಳು ಸಮಾಪ್ತಿಗೊಂಡ ಮೇಲೆ ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ಅಂತಿಮ ಆದೇಶವನ್ನು ಮೂವತ್ತು ದಿನಗಳೊಳಗೆ ಹೊರಡಿಸತಕ್ಕದ್ದು.

**23. ಉಚಿತ ಪ್ರತಿಗಳು :–** (1) ಪಕ್ಷಗಾರರಿಗೆ ನೀಡುವ ಪ್ರತಿಯೊಂದು ಉಚಿತ ಪ್ರತಿಯನ್ನು ಯಥಾ ಪ್ರತಿಗಳೆಂದು ದೃಢೀಕರಿಸತಕ್ಕದ್ದು ಮತ್ತು ಅವುಗಳ ಮೇಲೆ **"ಉಚಿತ ಪ್ರತಿ"** ಗಳೆಂದು ಮೇಲ್ ಬರಹವನ್ನು ನಮೂದಿಸಿ ದೃಢೀಕರಿಸತಕ್ಕದ್ದು.

(2) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ಅನ್ಯಥಾ ಆದೇಶಿಸಿದ ಹೊರತು, ಮಧ್ಯಂತರ ಆದೇಶದ ಉಚಿತ ಪ್ರತಿಗಳನ್ನು ಯಾವುದೇ ಪಕ್ಷಗಾರರಿಗೆ ನೀಡತಕ್ಕದ್ದಲ್ಲ.

(3) ವಕೀಲರು ಅರ್ಜಿದಾರರನ್ನು/ ಪ್ರತಿವಾದಿಗಳನ್ನು ಪ್ರತಿನಿಧಿಸುತ್ತಿದ್ದಲ್ಲಿ, ಅಂತಿಮ ಆದೇಶದ ಉಚಿತ ಪ್ರತಿಗಳನ್ನು ಸಂಬಂಧಪಟ್ಟ ವಕೀಲರಿಗೆ ವೈಯುಕ್ತಿಕವಾಗಿ ನೀಡತಕ್ಕದ್ದು.

(4) ಯಾವ ಪ್ರಕರಣದಲ್ಲಿ ಒಬ್ಬರಿಗಿಂತಲೂ ಹೆಚ್ಚಿನ ಅರ್ಜಿದಾರರು ಒಂದು ಸೆಟ್ಟನ್ನು ನ್ಯಾಯಾಲಯದ ಶುಲ್ಕದ ಜೊತೆಗೆ ಜಂಟಿ ಅರ್ಜಿಯನ್ನು ಸಲ್ಲಿಸಿದ್ದು ಅವುಗಳಲ್ಲಿ ಪ್ರತಿಯೊಬ್ಬರೂ ಏಕರೂಪದ ಪರಿಹಾರವನ್ನು ಕ್ಲೇಮು ಮಾಡಿದಲ್ಲಿ, ಈ ಎಲ್ಲಾ ಅರ್ಜಿದಾರರಿಗೆ ವಕಾಲತ್ತು ಸಲ್ಲಿಸಿದ ವಕೀಲನಿಗೆ ಅಂತಿಮ ಆದೇಶದ ಒಂದು ಪ್ರತಿಯನ್ನು ನೀಡತಕ್ಕದ್ದು.

**24. ದಾಖಲೆಗಳ ರಕ್ಷಣೆ:** (1) ದೂರಿನ ಪ್ರಕರಣಗಳಲ್ಲಿ, ಮೂಲ ಆದೇಶದ ಹಾಳೆಯನ್ನೊಳಗೊಂಡ ಮುಖ್ಯ ಕಡತದ ದಾಖಲೆಗಳನ್ನು 5 ವರ್ಷಗಳ ಕಾಲ ಸಂರಕ್ಷಿಸತಕ್ಕದ್ದು.

(2) ಕರ್ನಾಟಕ ರಾಜ್ಯ ಚುನಾವಣಾ ಆಯೋಗವು, ಅಂತಿಮ ಆದೇಶದ ದೃಢೀಕೃತ ಪ್ರತಿಗಳನ್ನು ನೀಡುವ ಸಂದರ್ಭದಲ್ಲಿ, ಪ್ರಕರಣವನ್ನು ಅಂತಿಮವಾಗಿ ಇತ್ಯರ್ಥಗೊಳಿಸುವಾಗ ಹೆಚ್ಚಿನ ಪ್ರತಿಗಳನ್ನು ಪಡೆದುಕೊಳ್ಳಲು ವೈಯುಕ್ತಿಕವಾಗಿ ಹಾಜರಾಗದೇ ಇರುವಂತಹ ಪಕ್ಷಗಾರರಿಗೆ ವಿಚಾರವನ್ನು ತಿಳಿಸತಕ್ಕದ್ದು.

(3) ದಾಖಲೆಗಳನ್ನು ಪಡೆಯಲು ಪಕ್ಷಗಾರರಿಗೆ ಕನಿಷ್ಠ ಒಂದು ತಿಂಗಳಿನ ಅವಧಿಯನ್ನು ನೀಡತಕ್ಕದ್ದು ಮತ್ತು ಒಂದು ವೇಳೆ ಪಡೆದುಕೊಳ್ಳಲು ಅವರು ತಪ್ಪಿದಲ್ಲಿ ಹೆಚ್ಚಿನ ಪ್ರತಿಗಳನ್ನು ಬೇಡವಾದುದು ಎಂದು ನಾಶಪಡಿಸತಕ್ಕದ್ದು.

**25. ದೃಢೀಕೃತ ಪ್ರತಿಗಳು:–** (1) ಆದೇಶದ ಪ್ರತಿಯೊಂದನ್ನು ಪಕ್ಷಗಾರರಿಗೆ ಉಚಿತವಾಗಿ ನೀಡತಕ್ಕದ್ದು.

(2) ದೃಢೀಕೃತ ಪ್ರತಿಗಾಗಿ ಸಲ್ಲಿಸಲಾಗುವ ಅರ್ಜಿಯು ಪ್ರಕರಣದ ಸಂಖ್ಯೆ, ವ್ಯವಹರಣೆಯ ಸ್ವರೂಪ, ತೀರ್ಪಿನ ಅಥವಾ ಆದೇಶದ ಅಥವಾ ದಾಖಲೆಯ ಅಥವಾ ಸಂದರ್ಭಾನುಸಾರವಾಗಿ ಹೇಳಿಕೆಯ ದಿನಾಂಕ ಮತ್ತು ಪೂರ್ಣ ವಿವರಣೆಯನ್ನು ಒಳಗೊಂಡಿರತಕ್ಕದ್ದು ಮತ್ತು ಎರಡು ರೂಪಾಯಿ ಕೋರ್ಟು ಶುಲ್ಕವನ್ನು ಲಗತ್ತಿಸಿರತಕ್ಕದ್ದು.

(3) ದೃಢೀಕೃತ ಪ್ರತಿಗಾಗಿ ಸಲ್ಲಿಸಲಾಗಿರುವ ಎಲ್ಲಾ ಅರ್ಜಿಗಳನ್ನು ಒಂದು ರಿಜಿಸ್ಟರ್‌ನಲ್ಲಿ ನಮೂದಿಸತಕ್ಕದ್ದು ಹಾಗೂ ಶುದ್ಧ ಪ್ರತಿಗಳನ್ನು ಪರಿಶೀಲಿಸುವ ಅಧಿಕಾರಿ – ಅಧೀಕ್ಷಕರು ಈ ರಿಜಿಸ್ಟರ್ ಅನ್ನು ನಿರ್ವಹಿಸತಕ್ಕದ್ದು.

(4) ರಿಜಿಸ್ಟರ್‌ನಲ್ಲಿ ನೀಡಿರುವ ಕ್ರಮ ಸಂಖ್ಯೆಯನ್ನು ಕೆಂಪು ಶಾಯಿಯಿಂದ ಅರ್ಜಿಯ ಪ್ರತಿಯಲ್ಲಿ ನಮೂದಿಸತಕ್ಕದ್ದು.

(5) ಪಕ್ಷಗಾರರ ಹೆಸರುಗಳು, ಅರ್ಜಿಯ ಸಂಖ್ಯೆ ಮತ್ತು ವಿಲೇಯಾದ ದಿನಾಂಕಗಳ ಕ್ರಮಬದ್ಧತೆಯನ್ನು ಪರಿಶೀಲಿಸಿದ ತರುವಾಯ, ದೃಢೀಕೃತ ಪ್ರತಿಗಳನ್ನು ಪಡೆಯಲು ಸಲ್ಲಿಸಿದ ಅರ್ಜಿಯನ್ನು ದೃಢೀಕೃತ ಪ್ರತಿ ಮಂಜೂರು ಮಾಡಲು ಪ್ರಾಧಿಕಾರ ನೀಡಲಾಗಿರುವ ಸಂಬಂಧಿಸಿದ ಅಧಿಕಾರಿಯ ಆದೇಶಕ್ಕಾಗಿ ಸಲ್ಲಿಸತಕ್ಕದ್ದು ಮತ್ತು ಇಂತಹ ಮಂಜೂರಾತಿ ಪಡೆದ ನಂತರವೇ ದೃಢೀಕೃತ ಪ್ರತಿಗಳನ್ನು ತಯಾರಿಸಿ ನೀಡತಕ್ಕದ್ದು.

(6) ಒಂದು ವೇಳೆ ಪಕ್ಷಗಾರನು ಒಂದು ಹೆಚ್ಚುವರಿ ಪ್ರತಿಯನ್ನು ಕೋರಿದರೆ, ದೃಢೀಕರಿಸಿದ ಹೆಚ್ಚುವರಿ ಪ್ರತಿಯನ್ನು ಹಾಳೆಗಳ ಸಂಖ್ಯೆ ಎಷ್ಟೇ ಇದ್ದರೂ, ಇಪ್ಪತ್ತು ರೂಪಾಯಿಗಳ ಪಾವತಿ ಪಡೆದು ಅವನಿಗೆ ನೀಡತಕ್ಕದ್ದು.

(7) ಒಂದು ಆದೇಶದ ದೃಢೀಕೃತ ಪ್ರತಿಯಲ್ಲಿ ಉಚಿತ ಪ್ರತಿಯನ್ನು ಯಾವ ದಿನಾಂಕದಂದು ನೀಡಲಾಯಿತು, ಅರ್ಜಿಯನ್ನು ಸಲ್ಲಿಸಿದ ದಿನಾಂಕ, ಯಾವ ದಿನಾಂಕದಂದು ಪ್ರತಿಯನ್ನು ಸಿದ್ದಗೊಳಿಸಲಾಯಿತು ಮತ್ತು ಯಾವ ದಿನದಂದು ಅದನ್ನು ವ್ಯಕ್ತಿಗೆ ರವಾನಿಸಲಾಯಿತು ಎಂಬ ಈ ಎಲ್ಲ ವಿವರಗಳನ್ನು ನಿರ್ದಿಷ್ಟವಾಗಿ ತಿಳಿಸತಕ್ಕದ್ದು.

(8) ಮತ್ತೊಂದು ದೃಢೀಕೃತ ಪ್ರತಿಯನ್ನು ಪಡೆಯಬೇಕಾದರೆ ಇಪ್ಪತ್ತು ರೂಪಾಯಿಗಳ ಶುಲ್ಕವನ್ನು ಪಾವತಿಸತಕ್ಕದ್ದು.

(9) ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಯಾವುದೇ ಫೈಲಿಗೆ ಸಂಬಂಧಿಸಿದ ಯಾವುದೇ ದಾಖಲೆಯ ದೃಢೀಕೃತ ಪ್ರತಿಯನ್ನು ಪಡೆಯಲು ಇಚ್ಛಿಸುವ ಅಂತಹ ಯಾವೊಬ್ಬ ಪಕ್ಷಕಾರನು, ದೃಢೀಕರಣಕ್ಕಾಗಿ ಇಪ್ಪತ್ತು ರೂಪಾಯಿಗಳನ್ನು ಪಾವತಿಸಿ ಪಡೆಯಬಹುದಾಗಿರುತ್ತದೆ:

ಪರಂತು, ಕೋರಿರತಕ್ಕ ದಾಖಲೆಯ ಅಂತಹ ದೃಢೀಕೃತ ಪ್ರತಿಯು 5 ಹಾಳೆಗೂ ಮೀರಿದರೆ ಅಂತಹ ಸಂದರ್ಭದಲ್ಲಿ ಇಪ್ಪತ್ತು ರೂಪಾಯಿಗಳಿಗೆ ಮೇಲ್ಪಟ್ಟು ಪ್ರತಿಯೊಂದು ಹಾಳೆಗೆ ಮೂರು ರೂಪಾಯಿಗಳಂತೆ ಹೆಚ್ಚುವರಿಯಾಗಿ ವಿಧಿಸತಕ್ಕದ್ದು.

(10) ಕರ್ನಾಟಕ ರಾಜ್ಯ ಚುನಾವಣಾ ಆಯೋಗದಿಂದ ಹೊರಡಿಸಲಾದ ಸಂಕೀರ್ಣ ಆದೇಶಗಳ ದೃಢೀಕೃತ ಪ್ರತಿಯನ್ನು ಪ್ರತಿ ದಾಖಲೆಗೆ ಐದು ರೂಪಾಯಿ ಪಾವತಿ ಪಡೆದು ಪೂರೈಸತಕ್ಕದ್ದು.

**26. ದಾಖಲೆಗಳ ಪರಿವೀಕ್ಷಣೆ:–** (1) ಹತ್ತು ರೂಪಾಯಿಗಳ ಶುಲ್ಕವನ್ನು ಅರ್ಜಿಯೊಂದಿಗೆ ಪಾವತಿಸಿ ಪಕ್ಷಗಾರರು ಅಥವಾ ಅವರ ಪ್ರತಿನಿಧಿಗಳು ದಾಖಲೆಗಳ ವಿಷಯವನ್ನು ಪರೀಕ್ಷಿಸಲು ಅವಕಾಶವಿರತಕ್ಕದ್ದು.

(2)ದಾಖಲೆಗಳ ಅಭಿರಕ್ಷಕರ ಸಮ್ಮುಖದಲ್ಲಿಯೇ ಪ್ರತಿಯೊಂದು ಶೋಧನೆ ಅಥವಾ ಪರಿವೀಕ್ಷಣೆಯನ್ನು ನಡೆಸತಕ್ಕದ್ದು ಮತ್ತು ದಾಖಲೆಗಳನ್ನು ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಅವರಣದಿಂದ ಹೊರಗೆ ಸಾಗಿಸುವುದನ್ನು ಹಾಗೂ ತೆಗೆದುಬಿಡುವುದನ್ನು ಸಂಪೂರ್ಣವಾಗಿ ನಿಷೇಧಿಸತಕ್ಕದ್ದು.

(3) ಶೋಧನೆ ಅಥವಾ ಪರಿವೀಕ್ಷಣೆ ನಡೆಸಲು ಅನುಮತಿಯನ್ನು ನೀಡಿದಾಗ, ಶೋಧನೆ ಅಥವಾ ಪರಿವೀಕ್ಷಣೆಯನ್ನು ಮಾಡುವ ವ್ಯಕ್ತಿಯು ದಾಖಲೆಗಳ ಟಿಪ್ಪಣಿಯನ್ನು ಮಾಡಿಕೊಳ್ಳಲು ಹಕ್ಕುಳ್ಳವನಾಗಿರುತ್ತಾರೆಯೇ ವಿನಃ ಯಾವುದೇ ಕಾರಣಕ್ಕಾಗಿಯಾಗಲಿ ದಾಖಲೆಯ ಯಾವುದೇ ಭಾಗದ ಪ್ರತಿಯನ್ನು ಮಾಡಿಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದಲ್ಲ.

**27.ಪರೇಶಾ–ಯಾದ್–ದಸ್ತ್ :–** ಯಾವುದೇ ಪಕ್ಷಗಾರನು ಸ್ವತಃ ಹಾಜರಾಗಿದ್ದು ಮತ್ತು ಅವನು ಅನಕ್ಷರಸ್ಥರಾಗಿದ್ದಲ್ಲಿ, ಅಂತಹ ಪಕ್ಷಗಾರನಿಗೆ ಬೆಂಚ್ ಕ್ಲರ್ಕನು ಮುಂದಿನ ವಿಚಾರಣೆ ದಿನಾಂಕವನ್ನು ಬರಹದ ಮುಖಾಂತರ ನೀಡತಕ್ಕದ್ದು.

**28. ಅಧಿಕಾರಗಳು ಹಾಗೂ ಪ್ರಕ್ರಿಯೆಗಳು:–** (1) ರಾಜ್ಯ ಚುನಾವಣಾ ಆಯೋಗದ ಆಯುಕ್ತರು ಸಿವಿಲ್ ಪ್ರಕ್ರಿಯಾ ಸಂಹಿತೆ, 1908 ರಲ್ಲಿ (1908 ರ 5) ವಿಧಿಸಲಾದ ಪ್ರಕ್ರಿಯೆಗಳಿಗೆ ಬದ್ಧರಾಗಿರತಕ್ಕದ್ದಲ್ಲ. ಆದರೆ ಸ್ವಾಭಾವಿಕ ನ್ಯಾಯಗಳ ತತ್ವಗಳಿಂದ ಮಾರ್ಗದರ್ಶನ ಹೊಂದುವವರಾಗಿರತಕ್ಕದ್ದು ಮತ್ತು ಸಿವಿಲ್ ಪ್ರಕಿಯಾ ಸಂಹಿತೆ, 1908 ರ (1908ರ 5ನೇ) ಉಪಬಂಧಗಳನ್ನು ಎಷ್ಟು ಸಾಧ್ಯವೋ ಅಷ್ಟರ ಮಟ್ಟಿಗೆ ಮಾತ್ರ ರಾಜ್ಯ ಚುನಾವಣಾ ಆಯೋಗದ ಪ್ರಕ್ರಿಯೆಗಳಿಗೆ ಅನ್ವಯಿಸತಕ್ಕದ್ದು.

(2) ಈ ಅಧಿನಿಯಮ ಹಾಗೂ ನಿಯಮಗಳ ಅಡಿಯಲ್ಲಿ ಕಾರ್ಯ ನಿರ್ವಹಿಸುವ ಉದ್ದೇಶದಿಂದ ರಾಜ್ಯ ಚುನಾವಣಾ ಆಯೋಗದ ಆಯುಕ್ತರು, ದಾವೆಗಳ ವಿಚಾರಣೆಯನ್ನು ಕೈಗೊಂಡಾಗ ಈ ಕೆಳಗೆ ಕಾಣಿಸಿರುವ ವಿಷಯಗಳಲ್ಲಿ ಸಿವಿಲ್ ಪ್ರಕ್ರಿಯಾ ಸಂಹಿತೆ, 1908 ರಲ್ಲಿ ಸಿವಿಲ್ ನ್ಯಾಯಾಲಯಗಳಿಗೆ ಪ್ರದತ್ತವಾದ ಅಧಿಕಾರವನ್ನೇ ಹೊಂದಿರತಕ್ಕದ್ದು, ಎಂದರೆ:–

(ಎ) ನ್ಯಾಯಾಲಯದ ಅಜ್ಞೆ ತಲುಪಿಸುವಲ್ಲಿ ಹಾಗೂ ಯಾವೊಬ್ಬ ವ್ಯಕ್ತಿಯನ್ನು ಸಮನ್ ಮಾಡುವುದು ಮತ್ತು ಹಾಜರಾತಿಯನ್ನು ಒತ್ತಾಯಿಸುವುದು ಹಾಗೂ ಅವನನ್ನು ವಿಚಾರಣೆಗೊಳಪಡಿಸುವುದು.

(ಬಿ) ದಾಖಲೆಗಳನ್ನು ಶೋಧಿಸುವುದು ಹಾಗೂ ಹಾಜರುಪಡಿಸಲು ಅಗತ್ಯಪಡಿಸುವುದು;

(ಸಿ) ಅಫೀಡವಿಟ್‌ನ ಮೂಲಕ ಸಾಕ್ಷ್ಯಾಧಾರಗಳನ್ನು ಸ್ವೀಕರಿಸುವುದು;

(ಡಿ) ಸಾಕ್ಷಿಗಳನ್ನು ಅಥವಾ ದಾಖಲೆಗಳನ್ನು ಪರೀಕ್ಷಿಸುವುದಕ್ಕೆ ಅಧಿಕಾರವನ್ನು ಹೊರಡಿಸುವುದು;

(ಇ) ತೀರ್ಮಾನಗಳನ್ನು ಪುನರ್ ವಿಮರ್ಶೆ ಮಾಡುವುದು;

(ಎಫ್) ದೋಷಗಳ ಕಾರಣದಿಂದಾಗಿ ಒಂದು ಅರ್ಜಿಯನ್ನು ವಜಾ ಮಾಡುವುದು ಅಥವಾ ಎಕ ಪಕ್ಷೀಯವಾಗಿ ಮಾಡಿದ ಆದೇಶವನ್ನು ತಳ್ಳಿಹಾಕುವುದು;

(ಜಿ) ದೋಷಗಳ ಕಾರಣಕ್ಕಾಗಿ ಯಾವುದೇ ಅರ್ಜಿಗಳನ್ನು ವಜಾ ಮಾಡಲ್ಪಟ್ಟ ಆದೇಶವನ್ನು ಹಾಗೂ ಏಕ ಪಕ್ಷೀಯವಾಗಿ ಮಾಡಿದ ಆದೇಶವನ್ನು ತಳ್ಳಿಹಾಕುವುದು.

(ಹೆಚ್) ಯಾವುದೇ ಇತರ ವಿಷಯಗಳು

(3) ದಾಖಲೆಗಳ ತಪಾಸಣೆಗಾಗಿ ಹಾಗೂ ದೃಢೀಕೃತ ಪ್ರತಿಗಳನ್ನು ಒದಗಿಸಲು ಸಂಗ್ರಹಿಸಿದ ಶುಲ್ಕವನ್ನು ಕರ್ನಾಟಕ ಆರ್ಥಿಕ ಸಂಹಿತೆಯ ಅನುಬಂಧ 250ನೇ ಹಾಗೂ 251 ನೇ ಅನುಚ್ಛೇದದಲ್ಲಿ ಸೂಚಿಸಿರುವಂತೆ ದೂರನ್ನು ದಾಖಲಿಸಲು ಇರುವ ಠೇವಣಿ ಶುಲ್ಕವನ್ನು ನಿರ್ವಹಿಸುವ ಉದ್ದೇಶದಿಂದ ಇಟ್ಟಿರುವ ಲೆಕ್ಕ ಶೀರ್ಷಿಕೆಯಲ್ಲಿ ಜಮಾ ಮಾಡತಕ್ಕದ್ದು.

**29. ವಿಚಾರಣೆಗಳು ಹಾಗೂ ವ್ಯವಹರಣೆಗಳು:–** ರಾಜ್ಯ ಚುನಾವಣಾ ಆಯೋಗದ ಮುಂದಿರುವ ಎಲ್ಲಾ ವ್ಯವಹರಣೆಗಳು ಭಾರತ ದಂಡ ಸಂಹಿತೆಯ 193, 219 ಹಾಗೂ 228 ನೇ ಪ್ರಕರಣಗಳಲ್ಲಿ ಅರ್ಥೈಸಿರುವಮತೆ ನ್ಯಾಯಾಂಗದ ವ್ಯವಹರಣೆಗಳೆಂದು ಭಾವಿಸತಕ್ಕದ್ದು ಹಾಗೂ ಈ ವ್ಯವಹರಣೆಗಳನ್ನು ನಡೆಸುವ ಪ್ರಾಧಿಕಾರವು ಇಂತಹ ಎಲ್ಲಾ ವ್ಯವಹರಣೆಗಳ ಉದ್ದೇಶಕ್ಕಾಗಿ ಸಿವಿಲ್ ನ್ಯಾಯಾಲಯವೆಂದು ಭಾವಿಸತಕ್ಕದ್ದು.

**30. ರಾಜ್ಯ ಚುನಾವಣಾ ಆಯೋಗದ ಆಯುಕ್ತರಲ್ಲಿ ಅಂತರ್ಗತವಾಗಿರುವ ಅಧಿಕಾರಿಗಳ ಉಳಿಸುವಿಕೆ:**–ಇದರಲ್ಲಿನ ಯಾವುದೇ ನಿಯಮಗಳು ರಾಜ್ಯ ಚುನಾವಣಾ ಆಯುಕ್ತರು ನ್ಯಾಯದ ಮೂಲೋದ್ದೇಶಕ್ಕಾಗಿ ಆದೇಶ ಹೊರಡಿಸಲು ನೀಡಿರುವ ಅಂತರ್ಗತ ಅಧಿಕಾರವನ್ನು ಬಾಧಿಸಬೇಕೆಂಬ ಅಥವಾ ಮಿತಿಗೊಳಿಸುವ ಅಥವಾ ನ್ಯಾಯಾಲಯದ ನಡುವಳಿಗಳ ತೆಗಳಿಕೆಯನ್ನು ತಡೆಯಬೇಕೆಂಬ ಗುರಿಯನ್ನು ಹೊಂದಿರುವುದಾಗಿ ಭಾವಿಸತಕ್ಕದ್ದಲ್ಲ.

**31. ಅರ್ಜಿ/ ದಾವೆ ಹೂಡಲು ಶುಲ್ಕ :**–ಕರ್ನಾಟಕ ರಾಜ್ಯ ಚುನಾವಣಾ ಆಯೋಗದಲ್ಲಿ ದಾಖಲು ಮಾಡುವ ಪ್ರತಿಯೊಂದು ದೂರು/ ಅರ್ಜಿಯು ಆಯೋಗದ ಬೆಂಗಳೂರಿನಲ್ಲಿ ಪಾವತಿಯಾಗತಕ್ಕದ್ದೆಂದು ಹೆಸರಿಸಿದ್ದು, ರಾಷ್ಟ್ರೀಕೃತ ಬ್ಯಾಂಕಿನ ರೂ.2500/– (ಎರಡು ಸಾವಿರದ ಐದು ನೂರು ರೂಪಾಯಿಗಳು ಮಾತ್ರ) ಮೊತ್ತದ ಡಿಮ್ಯಾಂಡ್ ಡ್ರಾಫ್ಟ್ ಅಥವಾ ಬ್ಯಾಂಕರ್ಸ್ ಚೆಕ್ ಅನ್ನು ಹೊಂದಿರತಕ್ಕದ್ದು. ಈ ನಿಯಮಗಳು ಜಾರಿಗೆ ಬಂದ ಬಳಿಕ ಮೇಲೆ ತಿಳಿಸಿದ ಶುಲ್ಕವನ್ನು ಪಾವತಿಸದೇ ಇರುವ ಯಾವುದೇ ದೂರು ಅರ್ಜಿಯನ್ನು ರಾಜ್ಯ ಚುನಾವಣಾ ಆಯೋಗದ ಎದುರು ಹೂಡಲ್ಪಟ್ಟಿದಲ್ಲಿ, ಅದನ್ನು ಪುರಸ್ಕರಿಸತಕ್ಕದ್ದಲ್ಲ ಮತ್ತು ಸ್ವೀಕರಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

**ಎಸ್.ಎಂ.ಜುಲ್‌ಫಿಖಾರ್ ಉಲ್ಲಾ**
ನಿರ್ದೇಶಕರು (ಪಂಚಾಯತ್ ರಾಜ್–2) ಹಾಗೂ
ಸರ್ಕಾರದ ಪದನಿಮಿತ್ತ ಜಂಟಿಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| ಭಾಗ – IV-A | ಬೆಂಗಳೂರು, ಶನಿವಾರ, ಮಾರ್ಚ್ ೦೭, ೨೦೧೫ (ಫಾಲ್ಗುಣ ೧೬, ಶಕ ವರ್ಷ ೧೯೩೬) | ನಂ. ೨೦೫ |
|---|---|---|
| Part – IV-A | Bengaluru, Saturday, March 07, 2015 (Phalguna 16, Shaka Varsha 1936) | No. 205 |



## ಸಂಸದೀಯ ವ್ಯವಹಾರಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 07 ಶಾಸನ 2012, ಬೆಂಗಳೂರು, ದಿನಾಂಕ: 07.03.2015**

ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ವಿಧೇಯಕ, 2014ಕ್ಕೆ 2015ರ ಮಾರ್ಚ್ ತಿಂಗಳ ಮೂರನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2015ರ ಕರ್ನಾಟಕ ಅಧಿನಿಯಮ ಸಂಖ್ಯೆ:10 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2015 ರ ಕರ್ನಾಟಕ ಅಧಿನಿಯಮ ಸಂಖ್ಯೆ: 10**

(2015 ರ ಮಾರ್ಚ್ ಏಳನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2014**

(2015ರ ಮಾರ್ಚ್ ಮೂರನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರದ ಸ್ಥಾಪನೆಗಾಗಿ ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಪ್ರಾಸಂಗಿಕವಾದ ಇತರ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ಅಧಿನಿಯಮ.

ನೀರಿನ ಹಕ್ಕು, ಭಾರತ ಸಂವಿಧಾನದ 21ನೇ ಅನುಚ್ಛೇದದ ಮೂಲಕ ಖಾತರಿ ನೀಡಲಾದ ಜೀವ ಸಂರಕ್ಷಣೆ ಹಕ್ಕಿನ ಒಂದು ಭಾಗವಾಗಿದೆ ಎಂದು ಸರ್ವೋಚ್ಚ ನ್ಯಾಯಾಲಯವು ಈಗಾಗಲೇ ತೀರ್ಪು ನೀಡಿರುವುದರಿಂದ;

ತೀವ್ರ ನಗರೀಕರಣ, ಕೈಗಾರಿಕೀಕರಣ ಮತ್ತು ಜನಸಂಖ್ಯಾ ಸ್ಫೋಟದಿಂದಾಗಿ ಕೆರೆಗಳು ಮತ್ತು ಸರೋವರಗಳಂಥ ಜಲಮೂಲಗಳ ಒಡ್ಡುಗಳನ್ನು ಒಡೆದು ಮತ್ತು ನೀರನ್ನು ಹೊರಗೆ ಹರಿಬಿಟ್ಟು, ನಗರ ಮತ್ತು ಕೈಗಾರಿಕಾ ಪ್ರದೇಶವಾಗಿ ಭೂ ಬಳಕೆಗಾಗಿ ಪರಿವರ್ತಿಸಲಾಗುತ್ತಿರುವುದರಿಂದ;

ಅಂಥ ಜಲಮೂಲಗಳನ್ನು ನಾಶಪಡಿಸುತ್ತಿರುವುದು, ತೀವ್ರ ನೀರಿನ ಕೊರತೆ ಮತ್ತು ಅಂತರ್ಜಲವು ಬರಿದಾಗುವುದಕ್ಕೆ ಎಡೆಮಾಡಿಕೊಟ್ಟಿರುವುದರಿಂದಾಗಿ ಜಲೀಯ ಸಸ್ಯ ಸಂಪತ್ತಿಗೆ ಮತ್ತು ಪ್ರಾಣಿ ಸಂಪತ್ತಿಗೆ ಬಾಧಕ ಉಂಟುಮಾಡುವುದಲ್ಲದೆ, ನೀರಾವರಿಗೆ, ಕುಡಿಯುವುದಕ್ಕೆ ನೀರು ಮತ್ತು ಜಾನುವಾರುಗಳ ಬಳಕೆಗೆ ನೀರಿನ ಲಭ್ಯತೆಯ ಮೇಲೆ ಪ್ರತಿಕೂಲ ಪರಿಣಾಮ ಬೀರುವುದರಿಂದ ಜಲಮೂಲಗಳ ರಕ್ಷಣೆ, ಸಂರಕ್ಷಣೆ ಮತ್ತು ಪುನಃಶ್ಚೇತನಗೊಳಿಸುವುದು ತುರ್ತಾಗಿ ಅಗತ್ಯವಾಗಿರುವುದರಿಂದ,

ಮತ್ತು ಈಗ ಜಲಮೂಲಗಳ ಅಂದರೆ ಕೆರೆಗಳು, ಸರೋವರಗಳು, ಜೌಗು ಪ್ರದೇಶಗಳು ಮತ್ತು ಅವುಗಳ ಜಲಾನಯನ ಪ್ರದೇಶಗಳು, ಒಳಹರಿವುಗಳು ಮತ್ತು ಹೊರಹರಿವುಗಳು ಅಂಥ ಜಲಮೂಲಗಳ ದೀರ್ಘಾವಧಿ ಪೋಷಣೆಯನ್ನು ಖಚಿತಪಡಿಸಿಕೊಳ್ಳುವ, ಅವುಗಳ ರಕ್ಷಣೆ, ಸಂರಕ್ಷಣೆ ಮತ್ತು ಪುನಃಶ್ಚೇತನಗೊಳಿಸುವ ಉದ್ದೇಶವನ್ನು ಸಾಧಿಸುವುದಕ್ಕಾಗಿ ಹಾಗೂ ಅಗತ್ಯವಾದ ಅಧಿಕಾರಗಳನ್ನು ಮತ್ತು ಪ್ರಕಾರ್ಯಗಳನ್ನು ಹೊಂದಿರುವ, ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರವನ್ನು ಸ್ಥಾಪಿಸಲು ಮತ್ತು ಅದಕ್ಕೆ ಸಂಬಂಧಪಟ್ಟ ಅಥವಾ ಪ್ರಾಸಂಗಿಕವಾದ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

## ಅಧ್ಯಾಯ - I

### ಪ್ರಾರಂಭಿಕ

**1. ಸಂಕ್ಷಿಪ್ತ ಹೆಸರು, ಪ್ರಾರಂಭ ಮತ್ತು ಅನ್ವಯ.–** (1) ಈ ಅಧಿನಿಯಮವನ್ನು ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2014 ಎಂದು ಕರೆಯತಕ್ಕದ್ದು.

(2) ಇದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

(3) ಕರ್ನಾಟಕ ರಾಜ್ಯದ ಎಲ್ಲಾ ಪೌರನಿಗಮಗಳ ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯೊಳಗೆ ಇರುವ ಅಥವಾ ಕಾಲಕಾಲಕ್ಕೆ ಸರ್ಕಾರವು ಅಧಿಸೂಚಿಸಬಹುದಾದ ಯಾವುದೇ ಇತರ ಜಲಕಾಯಗಳ ವ್ಯಾಪ್ತಿಯ ಅಥವಾ ಎಲ್ಲ ಸರೋವರಗಳಿಗೆ ಇದು ಅನ್ವಯವಾಗತಕ್ಕದ್ದು.

**2. ಪರಿಭಾಷೆಗಳು.–** (1) ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) **"ಪ್ರಾಧಿಕಾರ"** ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿತವಾದ ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ;

(ಬಿ) **"ಪ್ರಾಧಿಕೃತ ಅಧಿಕಾರಿ"** ಎಂದರೆ, 11ನೇ ಪ್ರಕರಣದ ಅಡಿಯಲ್ಲಿ ಸರ್ಕಾರವು ನೇಮಕ ಮಾಡಿದ ಯಾವೊಬ್ಬ ಅಧಿಕಾರಿ;

(ಸಿ) **"ಮುಖ್ಯ ಕಾರ್ಯನಿರ್ವಹಣಾಧಿಕಾರಿ"** ಎಂದರೆ, 9ನೇ ಪ್ರಕರಣದ ಅಡಿಯಲ್ಲಿ ನೇಮಕಮಾಡಲಾದ ಪ್ರಾಧಿಕಾರದ ಮುಖ್ಯ ಕಾರ್ಯನಿರ್ವಹಣಾಧಿಕಾರಿ;

(ಡಿ) **"ಹೆಸರಿಸಲಾದ ಅಧಿಕಾರಿ"** ಎಂದರೆ, ಅರಣ್ಯ ಇಲಾಖೆ ಅಥವಾ ನಗರಾಭಿವೃದ್ಧಿ ಇಲಾಖೆಗೆ ಸೇರಿದ 12ನೇ ಪ್ರಕರಣದ ಅಡಿಯಲ್ಲಿ ಪ್ರಾಧಿಕಾರವು ಹಾಗೆಂದು ನೇಮಕ ಮಾಡಿದ ಅಥವಾ ಹೆಸರಿಸಲಾದ ಯಾವೊಬ್ಬ ಅಧಿಕಾರಿ;

(ಇ) **"ಅಧಿಕೃತ ಅಧಿಕಾರಿ"** ಎಂದರೆ, 13ನೇ ಪ್ರಕರಣದ ಅಡಿಯಲ್ಲಿ ನೇಮಕ ಮಾಡಿದ ಯಾವೊಬ್ಬ ಅಧಿಕಾರಿ

(ಎಫ್) **"ಸರ್ಕಾರ"** ಎಂದರೆ, ಕರ್ನಾಟಕ ಸರ್ಕಾರ;

(ಜಿ) **"ಕೈಗಾರಿಕೆ"** ಎಂಬುದು, ನೀರು ಅಥವಾ ಯಾವುದೇ ದ್ರವವನ್ನು ಬಳಸುವ ಅಥವಾ ಹೊರ ಹರಿಯುವ ಚರಂಡಿ ನೀರು ಅಥವಾ ಕಾರ್ಖಾನೆಯ ಕಲ್ಮಶ ಪ್ರವಾಹಕ್ಕೆ ಎಡೆಮಾಡಿಕೊಡುವ ಯಾವುದೇ ಕಾರ್ಯಾಚರಣೆ ಅಥವಾ ಪ್ರಕ್ರಿಯೆ ಅಥವಾ ಸಂಸ್ಕರಣೆ ಮತ್ತು ವಿಲೆ ವ್ಯವಸ್ಥೆಯನ್ನು ಒಳಗೊಳ್ಳುತ್ತದೆ. ಆದರೆ ಯಾವುದೇ ಜಲವಿದ್ಯುತ್ ಘಟಕವನ್ನು ಇದು ಒಳಗೊಳ್ಳುವುದಿಲ್ಲ;

(ಹೆಚ್) "ಸರೋವರ" ಎಂದರೆ, ಅದರಲ್ಲಿ ನೀರು ಇರಲಿ ಅಥವಾ ಇಲ್ಲದಿರಲಿ, ಕಂದಾಯ ದಾಖಲೆಗಳಲ್ಲಿ ಹೇಳಲಾದ ಸರ್ಕಾರಿ ಕೆರೆ, ಖರಾಬ್ ಕೆರೆ, ಕುಂಟೆ, ಕಟ್ಟೆ ಅಥವಾ ಯಾವುದೇ ಇತರ ಹೆಸರಿನಿಂದ ಕರೆಯುವ ಒಳನಾಡು ಜಲಮೂಲ ಮತ್ತು ಅದು ಹೊರ ವಲಯ ಜಲಾನಯನ ಪ್ರದೇಶಗಳನ್ನು ರಾಜಕಾಲುವೆ ಮುಖ್ಯ ಒಳಹರಿವು (main feeder) ಒಳ ಹರಿವುಗಳನ್ನು, ಒಡ್ಡುಗಳನ್ನು, ಅಡ್ಡಕಟ್ಟೆಗಳನ್ನು, ತೂಬುಗಳನ್ನು, ಕಾಲುವೆಗಳನ್ನು, ಹೊರ ಹರಿವುಗಳನ್ನು ಹಾಗೂ ಹೊರಗೆ ಹರಿದು ಹೋಗುವ ಮುಖ್ಯ ಹರಿನೀರು ಕಾಲುವೆಗಳನ್ನು ಒಳಗೊಳ್ಳುತ್ತದೆ;

(ಐ) **"ಭೂ ನೈಸರ್ಗಿಕ ವಲಯ"** ಎಂಬುದು, ನೈಸರ್ಗಿಕವಾಗಿ ಬೆಳೆದಿರಲಿ ಅಥವಾ ಸೌಂದರ್ಯವನ್ನು ಹೆಚ್ಚಿಸುವುದಕ್ಕಾಗಿ ಜಲಮೂಲಗಳಲ್ಲಿ ಬೆಳೆಸಿರಲಿ, ಆ ಎಲ್ಲಾ ಮರಗಳು, ಪೊದೆಗಳು, ಹುಲ್ಲುಗಾವಲುಗಳನ್ನು ಒಳಗೊಳ್ಳುತ್ತದೆ;

(ಜೆ) **"ಅಧಿಸೂಚನೆ"** ಎಂದರೆ, ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟಿಸಲಾದ ಅಧಿಸೂಚನೆ

(ಕೆ) **"ಸದಸ್ಯ"** ಎಂದರೆ, ಅಧ್ಯಕ್ಷನನ್ನು ಒಳಗೊಂಡಂತೆ 3ನೇ ಪ್ರಕರಣದ (3)ನೇ ಉಪಪ್ರಕರಣ ಮತ್ತು (5)ನೇ ಉಪಪ್ರಕರಣಗಳಲ್ಲಿ ನಿರ್ದಿಷ್ಟಪಡಿಸಲಾದ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರದ ಸದಸ್ಯ;

(ಎಲ್) **"ಸಂಶೋಧನೆ"** ಎಂದರೆ, ಸರೋವರಗಳಿಗೆ ಸಂಬಂಧಪಟ್ಟ ಎಲ್ಲಾ ಸೂಕ್ತ ವಿಷಯಗಳ ಮೇಲಿನ ಅಧ್ಯಯನ ಅಥವಾ ವ್ಯವಸ್ಥಿತ ಅನ್ವೇಷಣೆ;

(ಎಂ) **"ಮೇಲ್ಮೈ ಜಲ"** ಎಂಬುದು, ಮೇಲೆ ಪರಿಭಾಷಿಸಲಾದಂತೆ ಸರೋವರಗಳ ಭೂಮಿಯ ಮೇಲೆ ಇರುವ ನೀರನ್ನು ಒಳಗೊಳ್ಳುತ್ತದೆ.

(2) ಈ ಅಧಿನಿಯಮದಲ್ಲಿ ಬಳಸಿದ ಆದರೆ ಇದರಲ್ಲಿ ಪರಿಭಾಷಿಸಿರದ ಪದಗಳು ಮತ್ತು ಪದಾವಳಿಗಳು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರಲ್ಲಿ (1964ರ ಕರ್ನಾಟಕ ಅಧಿನಿಯಮ 12) ಅವುಗಳಿಗೆ ಗೊತ್ತುಪಡಿಸಲಾದ ಅರ್ಥಗಳನ್ನೇ ಹೊಂದಿರತಕ್ಕದ್ದು.

## ಅಧ್ಯಾಯ – II

### ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ

**3. ಅಭಿವೃದ್ಧಿ ಪ್ರಾಧಿಕಾರದ ರಚನೆ.–** (1) ಈ ಅಧಿನಿಯಮದ ಪ್ರಾರಂಭದ ದಿನಾಂಕದ ತರುವಾಯ ಆದಷ್ಟು ಬೇಗನೆ, ಸರ್ಕಾರವು, ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಎಂದು ಕರೆಯಲಾಗುವ ಒಂದು ಪ್ರಾಧಿಕಾರವನ್ನು ರಚಿಸತಕ್ಕದ್ದು.

(2) ಪ್ರಾಧಿಕಾರವು, ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ಸ್ವತ್ತನ್ನು ಧಾರಣ ಮಾಡುವ ಅಧಿಕಾರವನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೆ ಗುರಿಯಾಗತಕ್ಕದ್ದು.

(3) ಪ್ರಾಧಿಕಾರದ ಆಡಳಿತ ಪರಿಷತ್ತು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

| | |
|---|---|
| (ಎ) ಸರ್ಕಾರದ ಮುಖ್ಯ ಕಾರ್ಯದರ್ಶಿಯು ಆಡಳಿತ ಪರಿಷತ್ತಿನ ಅಧ್ಯಕ್ಷರಾಗಿರತಕ್ಕದ್ದು; | |
| (ಬಿ) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ | ಪದನಿಮಿತ್ತ ಸದಸ್ಯರು |
| (ಸಿ) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಪದನಿಮಿತ್ತ ಸದಸ್ಯರು |
| (ಡಿ) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | ಪದನಿಮಿತ್ತ ಸದಸ್ಯರು |
| (ಇ) ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಸಣ್ಣ ನೀರಾವರಿ ಇಲಾಖೆ | ಪದನಿಮಿತ್ತ ಸದಸ್ಯರು |
| (ಎಫ್) ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ | ಪದನಿಮಿತ್ತ ಸದಸ್ಯರು |
| (ಜಿ) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | ಪದನಿಮಿತ್ತ ಸದಸ್ಯರು |
| (ಹೆಚ್) ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು | ಪದನಿಮಿತ್ತ ಸದಸ್ಯರು |
| (ಐ) ಅಧ್ಯಕ್ಷರು, ಬೆಂಗಳೂರು ಒಳಚರಂಡಿ ಮತ್ತು ನೀರು ಸರಬರಾಜು ಮಂಡಳಿ, ಬೆಂಗಳೂರು | ಪದನಿಮಿತ್ತ ಸದಸ್ಯರು |
| (ಜೆ) ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು | ಪದನಿಮಿತ್ತ ಸದಸ್ಯರು |
| (ಕೆ) ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು | ಪದನಿಮಿತ್ತ ಸದಸ್ಯರು |
| (ಎಲ್) ಸರ್ಕಾರದ ಕಾರ್ಯದರ್ಶಿ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ (ಜೀವಿ ಶಾಸ್ತ್ರ ಮತ್ತು ಪರಿಸರ) | ಪದನಿಮಿತ್ತ ಸದಸ್ಯರು |
| (ಎಂ) ಪರಿಸರ ಮತ್ತು ಜೀವಿಶಾಸ್ತ್ರ ಅಥವಾ ಸರೋವರ ಸಂರಕ್ಷಣೆ ಕ್ಷೇತ್ರದಲ್ಲಿ ತಜ್ಞರಾದವರ ಪೈಕಿಯಿಂದ ಸರ್ಕಾರವು ನೇಮಕ ಮಾಡಿದ ಮೂವರು ಅಧಿಕಾರೇತರ ಸದಸ್ಯರು, ಅವರಲ್ಲಿ ಕನಿಷ್ಟ ಒಬ್ಬರು ಮಹಿಳೆ ಇರತಕ್ಕದ್ದು ಮತ್ತು ಒಬ್ಬರು ಅನುಸೂಚಿತ ಜಾತಿ ಅಥವಾ ಅನುಸೂಚಿತ ಬುಡಕಟ್ಟುಗಳಿಗೆ ಸೇರಿದ ವ್ಯಕ್ತಿಯಾಗಿರತಕ್ಕದ್ದು | ಅಧಿಕಾರೇತರ ಸದಸ್ಯರು |
| (ಎನ್) ಪ್ರಾಧಿಕಾರದ ಮುಖ್ಯ ಕಾರ್ಯನಿರ್ವಹಣಾಧಿಕಾರಿ | ಸದಸ್ಯ–ಕಾರ್ಯದರ್ಶಿ |

(4) ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆಯ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿಯು ಅಧ್ಯಕ್ಷರಾಗಿರುವ ಪ್ರಾಧಿಕಾರದ ಒಂದು ಕಾರ್ಯನಿರ್ವಹಣಾ ಸಮಿತಿಯು ಇರತಕ್ಕದ್ದು. ಕಾರ್ಯನಿರ್ವಹಣಾ ಸಮಿತಿಯು ಪ್ರಾಧಿಕಾರದ ಅಧಿಕೃತ ಸಮಿತಿಯಾಗಿ ಕಾರ್ಯನಿರ್ವಹಿಸತಕ್ಕದ್ದು.

(5) ಪ್ರಾಧಿಕಾರದ ಕಾರ್ಯನಿರ್ವಹಣಾ ಸಮಿತಿಯು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

| | | |
|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 3. | ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಸಣ್ಣ ನೀರಾವರಿ ಇಲಾಖೆ | ಸದಸ್ಯರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಕಂದಾಯ ಇಲಾಖೆ | ಸದಸ್ಯರು |
| 6. | ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 7. | ಸರ್ಕಾರದ ಕಾರ್ಯದರ್ಶಿ(ಜೀವಿಶಾಸ್ತ್ರ ಮತ್ತು ಪರಿಸರ) ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ | ಸದಸ್ಯರು |

| | | |
|---|---|---|
| 8. | ಸದಸ್ಯ-ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು | ಸದಸ್ಯರು |
| 9. | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, (ಹೆಚ್‌ಒಎಫ್‌ಎಫ್)<br>ಅರಣ್ಯ ಇಲಾಖೆ | ಸದಸ್ಯರು |
| 10. | ಅಧ್ಯಕ್ಷರು, ಬೆಂಗಳೂರು ಒಳಚರಂಡಿ ಮತ್ತು ನೀರು ಸರಬರಾಜು ಮಂಡಳಿ, ಬೆಂಗಳೂರು | ಸದಸ್ಯರು |
| 11. | ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸದಸ್ಯರು |
| 12. | ಪ್ರಾಧಿಕಾರದ ಮುಖ್ಯ ಕಾರ್ಯನಿರ್ವಹಣಾಧಿಕಾರಿ | ಸದಸ್ಯ-ಕಾರ್ಯದರ್ಶಿ |

(6) ಸರ್ಕಾರವು, ತನ್ನ ಅಭಿಪ್ರಾಯದಲ್ಲಿ ಯಾವೊಬ್ಬ ಅಧಿಕಾರೇತರ ಸದಸ್ಯನು,-

(1) ನ್ಯಾಯ ನಿರ್ಣೀತ ದಿವಾಳಿಯಾದರೆ; ಅಥವಾ

(2) ನೈತಿಕ ಅಧಃಪತನವನ್ನು ಒಳಗೊಂಡ ಅಪರಾಧದ ಅಪರಾಧ ನಿರ್ಣೀತನಾದರೆ; ಅಥವಾ

(3) ಸದಸ್ಯನಾಗಿ ಕಾರ್ಯನಿರ್ವಹಿಸಲು ದೈಹಿಕವಾಗಿ ಅಥವಾ ಮಾನಸಿಕವಾಗಿ ಅಸಮರ್ಥನಾದರೆ; ಅಥವಾ

(4) ಅಧಿಕಾರದಲ್ಲಿ ಅವನ ಮುಂದುವರಿಕೆಯು ಸಾರ್ವಜನಿಕ ಹಿತಾಸಕ್ತಿಗೆ ಬಾಧಕವಾಗುವಂತೆ ಅವನು ತನ್ನ ಪದವನ್ನು ದುರುಪಯೋಗಪಡಿಸಿಕೊಂಡರೆ; ಅಥವಾ

(5) ಸದಸ್ಯನಾಗಿ ಅವನ ಪ್ರಕಾರ್ಯಗಳಿಗೆ ಪ್ರತಿಕೂಲ ಪರಿಣಾಮವನ್ನುಂಟು ಮಾಡುವ ಅಂಥ ಆರ್ಥಿಕ ಅಥವಾ ಇತರ ಹಿತಾಸಕ್ತಿಯನ್ನು ಹೊಂದಿದ್ದರೆ,

- ಆತನನ್ನು ಪ್ರಾಧಿಕಾರದಿಂದ ತೆಗೆದುಹಾಕಬಹುದು.

**4. ಪ್ರಾಧಿಕಾರದ ಸಭೆಗಳು.-**

(1) (ಎ) ಪ್ರಾಧಿಕಾರದ ಆಡಳಿತ ಪರಿಷತ್ತು ಹಣಕಾಸು ವರ್ಷದಲ್ಲಿ ಕನಿಷ್ಠ ಒಮ್ಮೆಯಾದರೂ ಸಭೆ ಸೇರತಕ್ಕದ್ದು;

(ಬಿ) ಪ್ರಾಧಿಕಾರದ ಕಾರ್ಯನಿರ್ವಹಣಾ ಸಮಿತಿಯು ಕನಿಷ್ಠ ಮೂರು ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು.

(2) ಅಧ್ಯಕ್ಷನು ಪ್ರಾಧಿಕಾರದ ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಅಥವಾ ಆತನಿಗೆ ಯಾವುದೇ ಕಾರಣಕ್ಕಾಗಿ, ಯಾವುದೇ ಸಭೆಯಲ್ಲಿ ಭಾಗವಹಿಸಲು ಸಾಧ್ಯವಾಗದಿದ್ದಲ್ಲಿ, ಸಭೆಯಲ್ಲಿ ಹಾಜರಿರುವ ಸದಸ್ಯರು ಆಯ್ಕೆ ಮಾಡುವ ಯಾವೊಬ್ಬ ಇತರ ಸದಸ್ಯನು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಪ್ರಾಧಿಕಾರದ ಸಭೆಯ ಗಣಪೂರ್ತಿಯು (ಕೋರಂ) ಒಟ್ಟು ಸದಸ್ಯರ ಸಂಖ್ಯೆಯ ಮೂರನೇ ಒಂದರಷ್ಟಿರತಕ್ಕದ್ದು.

(4) ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಅನ್ಯಥಾ ಸ್ಪಷ್ಟವಾಗಿ ಉಪಬಂಧಿಸಿದುದನ್ನುಳಿದು, ಪ್ರಾಧಿಕಾರದ ಸಭೆಯಲ್ಲಿ ವ್ಯವಹಾರಗಳ ನಡವಳಿಗಳಿಗಾಗಿನ ಕಾರ್ಯವಿಧಾನವು ವಿನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

**5. ಪ್ರಾಧಿಕಾರದ ಪ್ರಕಾರ್ಯಗಳು.-** ಈ ಅಧಿನಿಯಮ ಮತ್ತು ಅದರಡಿಯಲ್ಲಿ ರಚಿಸಿದ ನಿಯಮಗಳ ಉಪಬಂಧಗಳಿಗೆ ಒಳಪಟ್ಟು, ಪ್ರಾಧಿಕಾರದ ಪ್ರಕಾರ್ಯಗಳು, ಈ ಮುಂದಿನಂತೆ ಇರತಕ್ಕದ್ದು,-

(1) ಸರೋವರದ ಒತ್ತುವರಿಯನ್ನು ಪ್ರತಿಬಂಧಿಸುವುದು ಮತ್ತು ತೆರವುಗೊಳಿಸುವುದನ್ನು ಒಳಗೊಂಡಂತೆ ತನ್ನ ಅಧಿಕಾರ ವ್ಯಾಪ್ತಿಯೊಳಗೆ ಬರುವ ಎಲ್ಲಾ ಕೆರೆಗಳ ಮೇಲೆ ನಿಯಾಮಕ ನಿಯಂತ್ರಣವನ್ನು ಹೊಂದಿರುವುದು;

(2) ಕ್ಷೀಣಿಸುತ್ತಿರುವ ಅಂತರ್ಜಲವನ್ನು ಮರುಪೂರಣಗೊಳಿಸಲು ಸಂಬಂಧಪಟ್ಟ ಸರ್ಕಾರಿ ಇಲಾಖೆಗಳು, ಸ್ಥಳೀಯ ಮತ್ತು ಇತರ ಪ್ರಾಧಿಕಾರಿಗಳ ನೆರವಿನೊಂದಿಗೆ ಸಮಗ್ರ ಸಂಪರ್ಕವನ್ನು ಸಾಧಿಸಿಕೊಳ್ಳುವ ಮೂಲಕ ಸರೋವರಗಳನ್ನು ರಕ್ಷಿಸುವುದು, ಸಂರಕ್ಷಿಸುವುದು, ಪುನರ್ ರೂಪಿಸುವುದು, ಪುನರುಜ್ಜೀವನಗೊಳಿಸುವುದು ಮತ್ತು ಪೂರ್ವಸ್ಥಿತಿಗೆ ತರುವುದು;

(3) ಯಾವುದೇ ಅಥವಾ ಎಲ್ಲಾ ಸರೋವರಗಳಿಗೆ ಸಂಬಂಧಿಸಿದಂತೆ ಪರಿಸರಾತ್ಮಕ ಪ್ರಭಾವಗಳ ನಿರ್ಧರಣಾ ಅಧ್ಯಯನವನ್ನು ಕೈಗೊಳ್ಳುವುದು;

(4) ಭೌಗೋಳಿಕ ಮಾಹಿತಿ ವ್ಯವಸ್ಥೆಯ ಸಹಾಯದೊಂದಿಗೆ ಸರೋವರಗಳು ಮತ್ತು ಅವುಗಳ ಸುತ್ತಮುತ್ತಲ ಪ್ರದೇಶಗಳ ಪರಿಸರಾತ್ಮಕ ಯೋಜನೆ ಮತ್ತು ನಕ್ಷೆಯ ರಚನೆಯನ್ನು ಕೈಗೆತ್ತಿಕೊಳ್ಳುವುದು ಮತ್ತು ಸರೋವರಗಳು ಹಾಗೂ ಅವುಗಳ ಜಲಾನಯನಗಳ ಅಂಕಿಅಂಶಗಳನ್ನು (ಡೇಟಾಬೇಸ್) ಮತ್ತು ಅಟ್ಲಾಸನ್ನು ಸಿದ್ಧಪಡಿಸುವುದು;

(5) ಸರೋವರಗಳ ಸಮಗ್ರ ಅಭಿವೃದ್ಧಿಗೆ ಯೋಜನೆಯನ್ನು ಸಿದ್ಧಪಡಿಸುವುದು;

(6) ಚರಂಡಿಯ ಕಶ್ಮಲಗಳನ್ನು ಕಡಿಮೆ ಮಾಡುವ ಮತ್ತು ಚರಂಡಿಯ ರೊಚ್ಚನ್ನು ಸರೋವರಗಳಿಗೆ ಹರಿಯಬಿಡದಿರುವುದರ ಮೂಲಕ ಜಲ ಜೀವವೈವಿಧ್ಯ, ಜಲಪಕ್ಷಿಗಳು ಮತ್ತು ಜಲೀಯ ಸಸ್ಯಗಳು ವೃದ್ಧಿಸುವಂತೆ ಮಾಡುವುದು ಮತ್ತು ಅವುಗಳಿಗೆ ಬೇಕಾದ ಪರಿಸರವನ್ನು (ಜೌಗು ಭೂಮಿ) ಸೃಜಿಸುವುದು;

(7) ಮಳೆ (ಸ್ಟಾರ್ಮ್) ನೀರು ಚರಂಡಿ ವ್ಯವಸ್ಥೆಯ ಮೂಲಕ ನೀರು ಸಂಗ್ರಹಣೆಗಾಗಿ ಸೌಲಭ್ಯ ಕಲ್ಪಿಸುವುದು, ವನನಿರ್ಮಾಣವನ್ನು ಒಳಗೊಂಡಂತೆ ಸೂಕ್ತವಾದ ಮಣ್ಣಿನ ಮತ್ತು ನೀರಿನ ಸಂರಕ್ಷಣಾ ಕ್ರಮಗಳನ್ನು ಮೂಲಕ ಸರೋವರಗಳಲ್ಲಿ ಹೂಳು ಸೇರುವುದನ್ನು ಕಡಿಮೆ ಮಾಡುವುದು ಮತ್ತು ತೆಗೆದುಹಾಕುವುದು ಹಾಗೂ ಅಂತರ್ಜಲದ ಜಲಸ್ತರಗಳ ಮರುಪೂರಣವನ್ನು ಹೆಚ್ಚಿಸುವುದು ಮತ್ತು ಕೊಳವೆ ಬಾವಿಗಳನ್ನು ಪುನಶ್ಚೇತನಗೊಳಿಸುವುದು;

(8) ಅವಶ್ಯಕತೆಗನುಸಾರವಾಗಿ ನೀರಿನ ಗುಣಮಟ್ಟವನ್ನು ಸುಧಾರಿಸುವುದು ಮತ್ತು ಆ ಬಗ್ಗೆ ನಿಗಾವಹಿಸುವುದು, ಸರೋವರದ ಜೀವಿಪರಿಸರವನ್ನು ಸಂರಕ್ಷಿಸುವುದು ಹಾಗೂ ಗೃಹ ಮತ್ತು ಕೈಗಾರಿಕಾ ಮಾಲಿನ್ಯಗಳಿಂದ ಅವುಗಳನ್ನು ಸಂರಕ್ಷಿಸುವುದು;

(9) ಕುಡಿಯುವ ನೀರು, ಮೀನುಗಾರಿಕೆ, ನೀರಾವರಿ, ಶಿಕ್ಷಣ ಅಥವಾ ಪ್ರವಾಸೋದ್ಯಮ ಉದ್ದೇಶಗಳಿಗಾಗಿ ಅಥವಾ ಪ್ರಾಧಿಕಾರವು ನಿರ್ಧರಿಸಬಹುದಾದ ಯಾವುವೇ ಇತರ ಉದ್ದೇಶಗಳಿಗಾಗಿ ಸರೋವರಗಳನ್ನು ಬಳಸಿಕೊಳ್ಳುವುದು ಅಥವಾ ಬಳಸಿಕೊಳ್ಳಲು ಅನುಮತಿಸುವುದು;

(10) ಸಮುದಾಯಗಳು ಮತ್ತು ಸ್ವಯಂ ಸೇವಾ ಏಜೆನ್ಸಿಗಳು ಸರೋವರದ ಅಭಿವೃದ್ಧಿಯಲ್ಲಿ ಪಾಲ್ಗೊಳ್ಳುವಿಕೆಯನ್ನು ಪ್ರೋತ್ಸಾಹಿಸುವುದು ಮತ್ತು ಸರೋವರವನ್ನು ಸಂರಕ್ಷಿಸುವುದು, ಕಾಪಾಡುವುದು ಮತ್ತು ರಕ್ಷಿಸುವುದಕ್ಕಾಗಿ ಸಾರ್ವಜನಿಕ ಜಾಗೃತಿ ಕಾರ್ಯಕ್ರಮಗಳನ್ನು ಪ್ರಾರಂಭಿಸುವುದು;

(11) ಸರ್ಕಾರ ಅಥವಾ ಯಾವುದೇ ಸಂಸ್ಥೆಯು ಇದಕ್ಕೆ ಕಳುಹಿಸಬಹುದಾದಂಥ ಯಾವುದೇ ವಿಷಯದ ಮೇಲೆ ಸಲಹೆಯನ್ನು ನೀಡುವುದು;

(12) ಸರೋವರಗಳಿಗೆ ಸಂಬಂಧಿಸಿದ ಎಲ್ಲಾ ಪ್ರಸಕ್ತ ವಿಷಯಗಳ ಮೇಲೆ ಸಮಗ್ರ ಮತ್ತು ಸಮನ್ವಯಗೊಳಿಸಿದ ಪ್ರಾಯೋಗಿಕ ಸಂಶೋಧನೆಗೆ ಪ್ರೋತ್ಸಾಹಿಸುವುದು;

(13) ಈ ಅಧಿನಿಯಮದ ಉದ್ದೇಶಗಳನ್ನು ಸಾಧಿಸಲು, ಪ್ರಾಧಿಕಾರವು, ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ, ಅವಶ್ಯಕ, ಅನುಕೂಲಕರ ಅಥವಾ ಆನುಷಂಗಿಕವೆಂದು ಪರಿಗಣಿಸಬಹುದಾದ ಅಂಥ ಇತರ ಕಾರ್ಯಗಳನ್ನು ಮಾಡುವುದು.

**6. ಪ್ರಾಧಿಕಾರದ ಅಧಿಕಾರಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಅದರ ಅಡಿಯಲ್ಲಿ ರಚಿಸಿದ ನಿಯಮಗಳಿಗೆ ಒಳಪಟ್ಟು, ಪ್ರಾಧಿಕಾರದ ಅಧಿಕಾರಗಳು ಈ ಮುಂದಿನಂತೆ ಇರತಕ್ಕದ್ದು, ಎಂದರೆ:–

(1) ಭೂಮಾಪನ ಮಾಡುವುದಕ್ಕಾಗಿ, ಗಡಿಯನ್ನು ಗುರುತಿಸುವುದಕ್ಕಾಗಿ ಮತ್ತು ಸರೋವರಗಳ ನಕ್ಷೆಯನ್ನು ತಯಾರಿಸುವುದಕ್ಕಾಗಿ ಯಾವುದೇ ಭೂಮಿಯಲ್ಲಿ ಯಾವೊಬ್ಬ ಅಧಿಕಾರಿಯನ್ನು ಪ್ರವೇಶಿಸುವಂತೆ ಮಾಡುವುದು ಅಥವಾ ಪ್ರವೇಶಿಸುವುದಕ್ಕಾಗಿ ಪ್ರಾಧಿಕರಿಸುವುದು;

(2) ಅನುದಾನಗಳು, ವಂತಿಗೆಗಳು, ಕೊಡುಗೆಗಳು, ಠೇವಣಿಗಳು ಮತ್ತು ಬಾಡಿಗೆಗಳನ್ನು ಸ್ವೀಕರಿಸುವುದು ಮತ್ತು ಸರ್ಕಾರವು ಅನುಮೋದಿಸಿದ ಅಂಥ ದರಗಳಲ್ಲಿ ಸರೋವರಗಳ ಅಭಿವೃದ್ಧಿ ಮತ್ತು ನಿರ್ವಹಣೆಗಾಗಿ ಶುಲ್ಕಗಳನ್ನು ಅಥವಾ ದರಗಳನ್ನು ವಿಧಿಸುವುದು;

(3) ಸರೋವರದ ಅಭಿವೃದ್ಧಿ, ನಿರ್ವಹಣೆ, ಸಂರಕ್ಷಣೆ ಅಥವಾ ರಕ್ಷಣೆಯಲ್ಲಿ ಆಸಕ್ತಿಯಿರುವ ಯಾವುದೇ ಸರ್ಕಾರೀ ಇಲಾಖೆ ಅಥವಾ ಸಂಸ್ಥೆ ಅಥವಾ ಸಂಘ ಅಥವಾ ವ್ಯಕ್ತಿಯು ಮಾಡಿದ ಯಾವುದೇ ಯೋಜನಾ ಪ್ರಸ್ತಾವನೆಗೆ ತಾಂತ್ರಿಕ ಅನುಮೋದನೆಯನ್ನು ನೀಡುವುದು ಮತ್ತು ಸರ್ಕಾರವು ಅನುಮೋದಿಸಿದ ಅಂಥ ಚಟುವಟಿಕೆಗಳನ್ನು ಸ್ವತಃ ತಾನಾಗಿಯೇ ಕೈಗೊಳ್ಳುವುದು;

(4) ಅಗತ್ಯವಿರುವಾಗಲೆಲ್ಲ ತನ್ನ ಸಭೆಗಳಿಗೆ ತಜ್ಞರನ್ನು ಆಹ್ವಾನಿಸುವುದು;

(5) ಸರೋವರಗಳ ಸಂರಕ್ಷಣೆ, ಪರಿರಕ್ಷಣೆ, ರಕ್ಷಣೆಯ ಸಂಶೋಧನೆ, ಅನುಷ್ಠಾನ, ಅಧ್ಯಯನಗಳು, ಯೋಜನೆಗಳ ಅನುಮೋದನೆ, ಮುಂತಾದವುಗಳ ಉದ್ದೇಶಕ್ಕಾಗಿ ಮತ್ತು ಅದಕ್ಕೆ ಸಂಬಂಧಿಸಿದಂತೆ ಯಾವುದೇ ಇತರ ಉದ್ದೇಶಕ್ಕಾಗಿ ಅವಶ್ಯಕವೆಂದು ಭಾವಿಸಬಹುದಾದಂಥ ಉಪ–ಸಮಿತಿಗಳನ್ನು ರಚಿಸುವುದು; ಮತ್ತು

(6) ಸರೋವರದ ಸರಹದ್ದಿನ ಸಮೀಕ್ಷೆಯನ್ನು ಕೈಗೆತ್ತಿಕೊಳ್ಳುವುದು, ಒತ್ತುವರಿ ಯಾವುದಾದರೂ ಇದ್ದಲ್ಲಿ, ಅದನ್ನು ಪತ್ತೆ ಹಚ್ಚುವುದು ಮತ್ತು ಒತ್ತುವರಿಯನ್ನು ತೆರವುಗೊಳಿಸುವುದು ಹಾಗೂ ಸರೋವರದ ಒತ್ತುವರಿಯನ್ನು ತಡೆಯುವುದಕ್ಕೆ ಸರಹದ್ದು ಸ್ಥಂಭಗಳನ್ನು ನಿಲ್ಲಿಸುವುದು ಮತ್ತು ಅವುಗಳಿಗೆ ಬೇಲಿಯನ್ನು ಹಾಕುವುದು.

**7. ಆಡಳಿತ ಪರಿಷತ್ತಿನ ಅಧ್ಯಕ್ಷರ ಅಧಿಕಾರಗಳು.–** ಆಡಳಿತ ಪರಿಷತ್ತಿನ ಅಧ್ಯಕ್ಷರು ಪ್ರಾಧಿಕಾರದ ಕಾರ್ಯಕಾರೇತರ (non executive) ಮುಖ್ಯಸ್ಥರಾಗಿರತಕ್ಕದ್ದು ಮತ್ತು,–

(ಎ) ಆಡಳಿತ ಪರಿಷತ್ತಿನ ಸಭೆಗಳನ್ನು ಕರೆಯತಕ್ಕದ್ದು, ಅವುಗಳ ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಅವುಗಳನ್ನು ನಡೆಸತಕ್ಕದ್ದು;

(ಬಿ) ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಅವರಿಗೆ ಪ್ರದತ್ತವಾದ ಎಲ್ಲಾ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು ಪ್ರದತ್ತವಾದ ಎಲ್ಲಾ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

**8. ಕಾರ್ಯನಿರ್ವಹಣಾ ಸಮಿತಿಯ ಅಧ್ಯಕ್ಷನ ಅಧಿಕಾರಗಳು.–** ಕಾರ್ಯನಿರ್ವಹಣಾ ಸಮಿತಿಯ ಅಧ್ಯಕ್ಷನು ಪ್ರಾಧಿಕಾರದ ಕಾರ್ಯಕಾರೇತರ (non executive) ಮುಖ್ಯಸ್ಥನಾಗಿರತಕ್ಕದ್ದು ಮತ್ತು ಆತನು,–

(ಎ) ಕಾರ್ಯನಿರ್ವಹಣಾ ಸಮಿತಿಯ ಸಭೆಗಳನ್ನು ಕರೆಯತಕ್ಕದ್ದು, ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಸಭೆಯನ್ನು ನಡೆಸತಕ್ಕದ್ದು;

(ಬಿ) ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಆತನಿಗೆ ಪ್ರದತ್ತವಾದ ಎಲ್ಲಾ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು ಪ್ರದತ್ತವಾದ ಎಲ್ಲಾ ಅಧಿಕಾರಗಳನ್ನು ಚಲಾಯಿಸತಕ್ಕದ್ದು;

(ಸಿ) ಸರೋವರಗಳ ಪುನರುಜ್ಜೀವನ/ಅಭಿವೃದ್ಧಿ/ನಿರ್ವಹಣೆಗಾಗಿ ನಿಧಿಗಳನ್ನು ಕೋರತಕ್ಕದ್ದು;

(ಡಿ) ಜಲ ಪರಿಸರ ವ್ಯವಸ್ಥೆಯ ಸಂರಕ್ಷಣೆಗಾಗಿ ರಾಷ್ಟ್ರೀಯ ಯೋಜನೆಯಡಿ ಪರಿಸರ ಮತ್ತು ಅರಣ್ಯ ಮಂತ್ರಾಲಯಕ್ಕೆ ಸಲ್ಲಿಸಬೇಕಾದ ಸವಿವರ ಪರಿಯೋಜನೆ ವರದಿಗಳಿಗಾಗಿ (ಡಿಪಿಆರ್‌ಎಸ್) ಅನುಮೋದನೆಯನ್ನು ನೀಡತಕ್ಕದ್ದು, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ, 2000ದ ಅಡಿಯಲ್ಲಿ ಯುಕ್ತ ಪ್ರಕ್ರಿಯೆಯನ್ನು ಅನುಸರಿಸುವ ಮೂಲಕ ಕೈಗೊಳ್ಳಬೇಕಾದ ಕಾಮಗಾರಿಗಳಿಗಾಗಿ ಅನುಮೋದನೆಯನ್ನು ನೀಡತಕ್ಕದ್ದು;

(ಇ) ಮೇಲಿನ ಉದ್ದೇಶಗಳಿಗಾಗಿ ಯಾವುದೇ/ಯಾವುವೇ ಉಪ ಸಮಿತಿಯನ್ನು/ಗಳನ್ನು ರಚಿಸುವ ಅಧಿಕಾರಗಳನ್ನು ಹೊಂದಿರತಕ್ಕದ್ದು.

**9. ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ.–** (1) ಸರ್ಕಾರವು, ಸರ್ಕಾರದ ಕಾರ್ಯದರ್ಶಿಯ ದರ್ಜೆಗಿಂತ ಕಡಿಮೆಯಿರದ ಒಬ್ಬ ಅಧಿಕಾರಿಯನ್ನು ಅಥವಾ ತತ್ಸಮಾನ ಅಧಿಕಾರಿಯನ್ನು ಪ್ರಾಧಿಕಾರದ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯನ್ನಾಗಿ ನೇಮಿಸಬಹುದು.

(2) ಪ್ರಾಧಿಕಾರದ ಮತ್ತು ಅಧ್ಯಕ್ಷನ ಸಾಮಾನ್ಯ ಅಧಿಕಾರಗಳಿಗೆ ಒಳಪಟ್ಟು, ಈ ಅಧಿನಿಯಮದ ಮತ್ತು ಪ್ರಾಧಿಕಾರಕ್ಕೆ ಕರ್ತವ್ಯಗಳನ್ನು ವಿಧಿಸುವ ಅಥವಾ ಯಾವುವೇ ಅಧಿಕಾರಗಳನ್ನು ಪ್ರದಾನ ಮಾಡುವ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಉಪಬಂಧಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿನ ಎಲ್ಲಾ ಅಧಿಕಾರಗಳು ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯಲ್ಲಿ ನಿಹಿತವಾಗತಕ್ಕದ್ದು ಮತ್ತು ಆತನು,–

(ಎ) ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಅಡಿಯಲ್ಲಿ ಅವನಿಗೆ ವಿಧಿಸಿದ ಅಥವಾ ಪ್ರದತ್ತವಾದ ಎಲ್ಲಾ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು ಮತ್ತು ಎಲ್ಲಾ ಅಧಿಕಾರಗಳನ್ನು ಚಲಾಯಿಸತಕ್ಕದ್ದು;

(ಬಿ) ಪ್ರಾಧಿಕಾರದ ನಿರ್ಣಯಗಳನ್ನು ಜಾರಿಗೊಳಿಸತಕ್ಕದ್ದು;

(ಸಿ) ಪ್ರಾಧಿಕಾರದ ಎಲ್ಲಾ ವ್ಯವಹಾರಗಳನ್ನು ನಡೆಸತಕ್ಕದ್ದು;

(ಡಿ) ಸರ್ಕಾರವು ಅಥವಾ ಯಾವುದೇ ಇತರ ಪ್ರಾಧಿಕಾರವು ವಹಿಸಿದ ಪ್ರಾಧಿಕಾರದ ಎಲ್ಲಾ ಯೋಜನೆಗಳನ್ನು ಮತ್ತು ಕಾಮಗಾರಿಗಳನ್ನು ಕಾರ್ಯಗತಗೊಳಿಸುವುದರ ಮೇಲ್ವಿಚಾರಣೆಯನ್ನು ಮತ್ತು ನಿಯಂತ್ರಣವನ್ನು ಮಾಡತಕ್ಕದ್ದು;

(ಇ) ಪ್ರಾಧಿಕಾರದ ನಿಧಿಯಿಂದ ಹಣವನ್ನು ತೆಗೆಯತಕ್ಕದ್ದು ಮತ್ತು ಬಟವಾಡೆ ಮಾಡತಕ್ಕದ್ದು;

(ಎಫ್) ಪ್ರಾಧಿಕಾರದ ಅಧಿಕಾರಿಗಳ ಮತ್ತು ನೌಕರರ ಮೇಲೆ ನಿಯಂತ್ರಣವನ್ನು ಹೊಂದಿರತಕ್ಕದ್ದು;

(ಜಿ) ಪ್ರಾಧಿಕಾರದ ಎಲ್ಲಾ ಅನುಮತಿಗಳಿಗೆ, ಆದೇಶಗಳಿಗೆ, ತೀರ್ಮಾನಗಳಿಗೆ, ನೋಟೀಸುಗಳಿಗೆ ಮತ್ತು ಇತರ ದಸ್ತಾವೇಜುಗಳಿಗೆ ತಾನು ಸಹಿ ಮಾಡಿ ದೃಢೀಕರಿಸತಕ್ಕದ್ದು;

(ಹೆಚ್) ನಿಯಮಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**10. ಪ್ರಾಧಿಕಾರದ ಅಧಿಕಾರಿಗಳು ಮತ್ತು ಇತರ ನೌಕರರು.–** (1) ಸರ್ಕಾರವು, ಪ್ರಾಧಿಕಾರದ ಪ್ರಕಾರ್ಯಗಳನ್ನು ದಕ್ಷತೆಯಿಂದ ನೆರವೇರಿಸುವುದಕ್ಕಾಗಿ ಅಗತ್ಯವಾಗಬಹುದಾದ ಅಂಥ ಅಧಿಕಾರಿಗಳನ್ನು ಮತ್ತು ನೌಕರರನ್ನು ಪ್ರಾಧಿಕಾರಕ್ಕೆ ಒದಗಿಸತಕ್ಕದ್ದು.

(2) ಪ್ರಾಧಿಕಾರದ ಉದ್ದೇಶಕ್ಕಾಗಿ ನೇಮಕ ಮಾಡಲಾದ ಅಧಿಕಾರಿಗಳ ಮತ್ತು ಇತರ ನೌಕರರ ನೇಮಕಾತಿ ವಿಧಾನ, ಸಂದಾಯ ಮಾಡತಕ್ಕ ಸಂಬಳಗಳು ಮತ್ತು ಭತ್ಯೆಗಳು ಹಾಗೂ ಸೇವೆಯ ಇತರ ನಿಬಂಧನೆಗಳು ಮತ್ತು ಷರತ್ತುಗಳು ಇವುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

**11. ಪ್ರಾಧಿಕೃತ ಅಧಿಕಾರಿ.–** ಸರ್ಕಾರವು, ರಾಜ್ಯ ಸಿವಿಲ್ ಸೇವೆಗಳ ಗ್ರೂಪ್–ಎ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಒಬ್ಬ ಸರ್ಕಾರಿ ಅಧಿಕಾರಿಯನ್ನು ಪ್ರಾಧಿಕೃತ ಅಧಿಕಾರಿಯಾಗಿ ನೇಮಕ ಮಾಡಬಹುದು, ಆತನು ಈ ಅಧಿನಿಯಮದ ಅಡಿಯಲ್ಲಿನ ಅಧಿಕಾರಗಳನ್ನು ಮತ್ತು ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

**12. ಹೆಸರಿಸಲಾದ ಅಧಿಕಾರಿ.–** (1) ಪ್ರಾಧಿಕಾರವು, ಸರೋವರಗಳ ರಕ್ಷಣೆ, ಸಂರಕ್ಷಣೆ ಮತ್ತು ಅಭಿವೃದ್ಧಿಯನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಹಾಗೂ ಯಾವುದೇ ಇತರ ಉದ್ದೇಶಕ್ಕಾಗಿ ಒಂದು ಅಥವಾ ಹೆಚ್ಚು ಸರೋವರಗಳ ಉಸ್ತುವಾರಿಯನ್ನು ವಹಿಸಿಕೊಳ್ಳುವುದಕ್ಕಾಗಿ, ಯಾವೊಬ್ಬ ಅಧಿಕಾರಿಯನ್ನು ಹೆಸರಿಸಲಾದ ಅಧಿಕಾರಿಯೆಂದು ಹೆಸರಿಸಬಹುದು ಅಥವಾ ನೇಮಕ ಮಾಡಬಹುದು.

(2) ಹೆಸರಿಸಲಾದ ಅಧಿಕಾರಿಗಳು, ಈ ಅಧಿನಿಯಮದ ಅಡಿಯಲ್ಲಿಯ ಅಧಿಕಾರಗಳನ್ನು ಮತ್ತು ಪ್ರಾಧಿಕಾರವು ವಿಶೇಷ ಅಥವಾ ಸಾಮಾನ್ಯ ಆದೇಶದ ಮೂಲಕ ಅವರಿಗೆ ಪ್ರದಾನ ಮಾಡಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

**13. ಅಧಿಕೃತ ಅಧಿಕಾರಿ.–** ಪ್ರಾಧಿಕಾರವು, ಹೆಸರಿಸಲಾದ ಅಧಿಕಾರಿಗೆ ವಹಿಸಿದ ಯಾವುವೇ ಕೆಲಸಗಳನ್ನು ನಿರ್ವಹಿಸಲು ಯಾವೊಬ್ಬ ಅಧಿಕಾರಿಯನ್ನು ಅಧಿಕೃತ ಅಧಿಕಾರಿ ಎಂದು ಹೆಸರಿಸಬಹುದು ಅಥವಾ ನೇಮಕ ಮಾಡಬಹುದು.

## ಅಧ್ಯಾಯ – III

## ಸರೋವರಗಳ ರಕ್ಷಣೆ

**14. ಸರೋವರಗಳಲ್ಲಿ ನಿಷೇಧಿಸಲಾದ ಚಟುವಟಿಕೆಗಳು.–** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಇದಕ್ಕೆ ವಿರುದ್ಧವಾದುದು ಏನೇ ಇದ್ದರೂ, ಯಾವೊಬ್ಬ ವ್ಯಕ್ತಿಯು ಅಥವಾ ಸಂಸ್ಥೆಯು ಅಥವಾ ಸಂಘಟನೆಯು (ನೋಂದಾಯಿತವಾದ ಅಥವಾ ನೋಂದಾಯಿತವಾಗಿಲ್ಲದ) ಅಥವಾ ಕಂಪನಿಯು ಅಥವಾ ಫರ್ಮು ಅಥವಾ ಸಂಘವು, ಸರ್ಕಾರಿ ಇಲಾಖೆಗಳು, ನಿಗಮ ಅಥವಾ ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರವು ಮತ್ತು ಅವುಗಳ ಏಜೆಂಟರು ಅಥವಾ ನೌಕರರು ಅಥವಾ ಅವುಗಳ ಪರವಾಗಿ ಯಾವುದೇ ಸಂಸ್ಥೆಯು,–

(1) ನೀರನ್ನು ಸಂಗ್ರಹಿಸುವುದಕ್ಕಾಗಿ ಅಥವಾ ಹಿಡಿದಿಟ್ಟುಕೊಳ್ಳುವುದಕ್ಕಾಗಿ ಅಥವಾ 5ನೇ ಪ್ರಕರಣದ (9)ನೇ ಖಂಡದಲ್ಲಿ ಹೇಳಿದ ಉದ್ದೇಶದ ಹೊರತಾಗಿ ಇತರ ಯಾವುದೇ ಉದ್ದೇಶಕ್ಕಾಗಿ ಸರೋವರವನ್ನು ಬಳಸತಕ್ಕದ್ದಲ್ಲ;

(2) ಸರೋವರ ಭೂಮಿಯ ಮೇಲೆ ಯಾವುದೇ ರಚನೆಯನ್ನು ನಿರ್ಮಿಸತಕ್ಕದ್ದಲ್ಲ, ಯಾವುದೇ ಸರೋವರ ಭೂಮಿಯನ್ನು ಅಥವಾ ಅದರ ಯಾವುದೇ ಭಾಗವನ್ನು ಅಧಿಭೋಗಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ ಅಥವಾ ಪ್ರವಾಹದ ವಿರುದ್ಧವಾಗಿ ಮತ್ತು ಪ್ರವಾಹದ ಹರಿವಿನಲ್ಲಿರುವ ಸರೋವರದಲ್ಲಿ ಅಥವಾ ಸರೋವರದಿಂದ ನೀರು ಹರಿದು ಬರುತ್ತಿರುವ ಅಥವಾ ನೀರು ಹರಿದು ಹೋಗುತ್ತಿರುವ ಸ್ವಾಭಾವಿಕ ಅಥವಾ ಸಾಮಾನ್ಯವಾಗಿ ನೀರು ಹರಿಯುತ್ತಿರುವುದಕ್ಕೆ ಯಾವುದೇ ಅಡ್ಡಿಯನ್ನು ಉಂಟು ಮಾಡತಕ್ಕದ್ದಲ್ಲ;

(3) ಸರೋವರದ ಹೊರಗಿನ ಸರಹದ್ದಿನಿಂದ ಸರ್ಕಾರವು ಅಧಿಸೂಚಿಸಬಹುದಾಂಥ ದೂರದೊಳಗೆ ಅಕ್ರಮ ಮತ್ತು ಅನಧಿಕೃತವಾಗಿ ಯಾವುದೇ ವಾಣಿಜ್ಯ, ಮನರಂಜನೆ ಅಥವಾ ಕೈಗಾರಿಕಾ ಸಂಕೀರ್ಣಗಳನ್ನು ಅಥವಾ ಮನೆಗಳನ್ನು ಕಟ್ಟತಕ್ಕದ್ದಲ್ಲ ಅಥವಾ ಯಾವುದೇ ಕೈಗಾರಿಕಾ ಚಟುವಟಿಕೆಗಳನ್ನು ನಡೆಸತಕ್ಕದ್ದಲ್ಲ;

(4) ವಾಹನವನ್ನು ಬಳಸಿ ಅಥವಾ ಇತರ ರೀತಿಯಲ್ಲಿ ಸರೋವರದೊಳಗೆ ಭಗ್ನಾವಶೇಷಗಳನ್ನು, ಪೌರ ಘನತ್ಯಾಜ್ಯಗಳನ್ನು, ಕೆಸರನ್ನು ಅಥವಾ ಮಣ್ಣನ್ನು ಅಥವಾ ದ್ರವ ತ್ಯಾಜ್ಯಗಳನ್ನು ಅಥವಾ ಯಾವುವೇ ಮಾಲಿನ್ಯಕಾರಕಗಳನ್ನು ರಾಶಿ ಹಾಕತಕ್ಕದ್ದಲ್ಲ;

(5) ನೇರವಾಗಿಯಾಗಲಿ ಅಥವಾ ಪರೋಕ್ಷವಾಗಿಯಾಗಲಿ ಸರೋವರದೊಳಗೆ ಸಂಸ್ಕರಿಸದಿರುವ ಚರಂಡಿ ನೀರನ್ನು ಹರಿಬಿಡತಕ್ಕದ್ದಲ್ಲ;

(6) ಸರೋವರದ ಒಡ್ಡು ಸೇರಿದಂತೆ ಸರೋವರ ಪ್ರದೇಶದೊಳಗೆ ರಸ್ತೆಗಳನ್ನು, ಸೇತುವೆಗಳನ್ನು ಮತ್ತು ಅದೇ ರೀತಿಯ ಇತರ ರಚನೆಗಳನ್ನು ನಿರ್ಮಿಸತಕ್ಕದ್ದಲ್ಲ;

(7) ಒಡ್ಡನ್ನು, ನಿರುಪಯುಕ್ತ ತೂಬಿನ ಮೂಲ ಎತ್ತರವನ್ನು ಕಡಿಮೆ ಮಾಡುವುದು ಒಳಗೊಂಡಂತೆ ನಿರುಪಯುಕ್ತ ತೂಬನ್ನು ಒಡೆದುಹಾಕತಕ್ಕದ್ದಲ್ಲ ಅಥವಾ ಬೇಲಿಯನ್ನು, ಗಡಿಗುರುತು ಕಲ್ಲುಗಳನ್ನು ತೆಗೆದುಹಾಕತಕ್ಕದ್ದಲ್ಲ ಅಥವಾ ಪ್ರಾಧಿಕಾರವು ನಿರ್ಮಿಸಿದ ಭಿತ್ತಿಪತ್ರಗಳನ್ನು ಅಥವಾ ಯಾವುದೇ ಸೂಚನಾ ಫಲಕಗಳನ್ನು ತೆಗೆದು ಹಾಕತಕ್ಕದ್ದಲ್ಲ; ಮತ್ತು

(8) ಸರೋವರಗಳಿಗೆ ನೇರವಾಗಿ ಅಥವಾ ಪರೋಕ್ಷವಾಗಿ ಬಾಧಕವಾದ ಯಾವುದೇ ಕೃತ್ಯವನ್ನು ಮಾಡತಕ್ಕದ್ದಲ್ಲ:

ಪರಂತು, ಈ ಅಧಿನಿಯಮದಲ್ಲಿರುವುದು ಯಾವುದು, ಪ್ರಾಧಿಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದ ಯಾವುದೇ ಸರೋವರದಿಂದ ಕುಡಿಯುವುದಕ್ಕಾಗಿ ಅಥವಾ ನೀರಾವರಿಗಾಗಿ ಅಥವಾ ಮಾನವ ಬಳಕೆಗಾಗಿನ ಯಾವುದೇ ಉದ್ದೇಶಕ್ಕಾಗಿ ನೀರನ್ನು ತೆಗೆದುಕೊಳ್ಳುವುದನ್ನು ಪ್ರತಿಬಂಧಿಸತಕ್ಕದ್ದಲ್ಲ:

ಮತ್ತು ಪರಂತು, ಈ ಅಧಿನಿಯಮದಲ್ಲಿರುವುದಾವುದೂ, ಸರ್ಕಾರವು ಮತ್ತು ಪ್ರಾಧಿಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಿದ ಯಾವುದೇ ಸರೋವರದಲ್ಲಿ ಅದರ ಲೈಸನ್ಸ್‌ದಾರನು, ಗೇಣಿದಾರನು ಅಥವಾ ಗುತ್ತಿಗೆದಾರನು (ಸರೋವರದ ಜಲ ಜೀವ ಪರಿಸರ ವ್ಯವಸ್ಥೆಗೆ ಅಪಾಯಕಾರಿಯಾದ ಅಥವಾ ಉಪದ್ರವಕಾರಿಯಾದ ಮೀನಿನ ಹೊರತಾಗಿ) ಮೀನು ಮರಿಗಳ ಸಂಗ್ರಹಣೆಯನ್ನು ಮತ್ತು ಮಿನುಗಾರಿಕೆ ಅಭಿವೃದ್ಧಿಯನ್ನು ಪ್ರತಿಬಂಧಿಸತಕ್ಕದ್ದಲ್ಲ.

**15. ಸರೋವರಗಳ ರಕ್ಷಣೆ.–** (1) ಪ್ರಾಧಿಕಾರವು, ಯಾವುದೇ ಸರೋವರದ ಅಭಿರಕ್ಷಕನಾಗಿರುವ ಅಥವಾ ಅದರ ನಿಯಂತ್ರಣವನ್ನು ಹೊಂದಿರುವ, ಸರ್ಕಾರದ ಅಥವಾ ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರದ ಯಾವೊಬ್ಬ ಅಧಿಕಾರಿಗೆ ಸರೋವರದ ಸರಹದ್ದುಗಳನ್ನು ಖಾಯಂ ಆಗಿ ಗುರುತಿಸಲು ಮತ್ತು ಅವಶ್ಯವಾಗಬಹುದಾದ ಅಂಥ ಇತರ ಕ್ರಮಗಳನ್ನು ಅವರ ಸ್ವಂತ ಖರ್ಚಿನಲ್ಲಿ ಕೈಗೊಳ್ಳುವುದಕ್ಕೆ ನಿರ್ದೇಶಿಸಬಹುದು.

(2) ಪ್ರಾಧಿಕಾರವು, ಯಾವುದೇ ಸರೋವರದ ಅಭಿರಕ್ಷಕನಾಗಿರುವ ಅಥವಾ ಅದರ ನಿಯಂತ್ರಣವನ್ನು ಹೊಂದಿರುವ, ಸರ್ಕಾರಿ ಇಲಾಖೆಯ ಅಥವಾ ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರದ ಯಾವೊಬ್ಬ ಅಧಿಕಾರಿಗೆ, ಅಂಥ ಸರೋವರದ ಒತ್ತುವರಿಯನ್ನು ಅಥವಾ ಅನಧಿಕೃತ ಅಧಿಭೋಗದಾರಿಕೆಯನ್ನು ತೆರವುಗೊಳಿಸುವುದಕ್ಕೆ ಮತ್ತು ಅದು ಪುನರಾವರ್ತನೆಯಾಗುವುದನ್ನು ಪ್ರತಿಬಂಧಿಸುವುದಕ್ಕಾಗಿ ಅವಶ್ಯಕವಾದ ಮತ್ತು ಯುಕ್ತವಾದಂಥ ಕ್ರಮಗಳನ್ನು ಕೈಗೊಳ್ಳುವುದಕ್ಕೆ ಸಾಮಾನ್ಯ ಅಥವಾ ನಿರ್ದಿಷ್ಟ ನಿರ್ದೇಶನಗಳನ್ನು ನೀಡಬಹುದು.

(3) ಪ್ರಾಧಿಕಾರವು, ಯಾವುದೇ ಸರೋವರವನ್ನು ಒಂದು ಪಾರಂಪರಿಕ ತಾಣವೆಂದು ಅಥವಾ ಜೈವಿಕ ಸಂರಕ್ಷಣಾ ತಾಣವೆಂದು ಅಥವಾ ರಕ್ಷಿತ ತಾಣವೆಂದು ಅಥವಾ ಅದರ ಐತಿಹಾಸಿಕ, ಜೀವಿಶಾಸ್ತ್ರ ಅಥವಾ ಪರಿಸರದ ಮಹತ್ವವನ್ನು ಗಮನಿಸಿ ಯಾವುದೇ ವಿಶೇಷ ಉದ್ದೇಶಕ್ಕಾಗಿ ಮೀಸಲಿಟ್ಟ ತಾಣವೆಂದು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದು ಮತ್ತು ಯಾವುದೇ ಇತರ ಪರ್ಯಾಯ ಬಳಕೆಯಾಗುವುದನ್ನು ತಡೆಯಬಹುದು ಹಾಗೂ ಅದರ ಉಪಯೋಗ ಯಾವುದಾದರೂ ಇದ್ದರೆ, ಅದನ್ನು ನಿರ್ದಿಷ್ಟಪಡಿಸಬಹುದು.

**16. ವಶಪಡಿಸಿಕೊಳ್ಳಬೇಕಾದ ಸ್ವತ್ತನ್ನು ಸ್ವಾಧೀನಪಡಿಸಿಕೊಳ್ಳುವುದು.–** (1) ಮೇಲಿನ 25ನೇ ಪ್ರಕರಣದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧವು ಘಟಿಸಿದೆಯೆಂದು ನಂಬಲು ಕಾರಣವಿದ್ದಾಗ ಯಾವುದೇ ಅಂಥ ಅಪರಾಧವು ಘಟಿಸುವಲ್ಲಿ ಬಳಸಿದ ಯಾವುದೇ ಸಾಧನ, ಸಲಕರಣೆ, ಯಂತ್ರೋಪಕರಣ, ಉಪಕರಣ, ಸಾಧನಸಾಮಗ್ರಿ, ದೋಣಿ, ವಾಹನ ಅಥವಾ ಇತರ ಯಾವುದೇ ಇತರ ಸಾಮಗ್ರಿ ಅಥವಾ ವಸ್ತುವನ್ನು, ಹೆಸರಿಸಲಾದ ಅಧಿಕಾರಿಯು ಅಥವಾ ಈ ಬಗ್ಗೆ ಪ್ರಾಧಿಕಾರವು ಅಧಿಕೃತಗೊಳಿಸಿದ ಯಾವೊಬ್ಬ ಇತರ ಅಧಿಕಾರಿಯು ಸ್ವಾಧೀನಪಡಿಸಿಕೊಳ್ಳಬಹುದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಯಾವುದೇ ಸ್ವತ್ತನ್ನು, ವಾಹನವನ್ನು, ಸಾಮಗ್ರಿಯನ್ನು ಅಥವಾ ವಸ್ತುವನ್ನು ಸ್ವಾಧೀನಪಡಿಸಿಕೊಳ್ಳುವ ಹೆಸರಿಸಲಾದ ಅಧಿಕಾರಿ ಅಥವಾ ಅಧಿಕೃತಗೊಳಿಸಿದ ಅಧಿಕಾರಿಯು, ಹಾಗೆ ಅವುಗಳನ್ನು ಸ್ವಾಧೀನಪಡಿಸಿಕೊಳ್ಳಲಾಗಿದೆಯೆಂದು ತಿಳಿಸುವ ಗುರುತನ್ನು ಅವುಗಳ ಮೇಲೆ ಹಾಕತಕ್ಕದ್ದು ಮತ್ತು ಸಾಧ್ಯವಾದಷ್ಟು ಬೇಗನೆ, ಸ್ವಾಧೀನಪಡಿಸಿಕೊಳ್ಳಲಾದುದಕ್ಕೆ ಸಂಬಂಧಿಸಿದಂತೆ ಅಪರಾಧದ ವಿಚಾರಣೆ ನಡೆಸಲು ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಮ್ಯಾಜಿಸ್ಟ್ರೇಟರಿಗೆ ಅಥವಾ ಪ್ರಾಧಿಕೃತ ಅಧಿಕಾರಿಗೆ ಹಾಗೆ ಸ್ವಾಧೀನಪಡಿಸಿಕೊಂಡ ಬಗ್ಗೆ ವರದಿಯನ್ನು ಮಾಡತಕ್ಕದ್ದು. ಸ್ವಾಧೀನಪಡಿಸಿಕೊಳ್ಳುವ ಪ್ರಕ್ರಿಯೆಯು ದಂಡ ಪ್ರಕ್ರಿಯೆ ಸಂಹಿತೆ, 1973ರಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು:

ಪರಂತು, ಸ್ವಾಧೀನಪಡಿಸಿಕೊಂಡ ಸ್ವತ್ತು, ವಾಹನ, ಸಾಮಗ್ರಿ ಅಥವಾ ವಸ್ತು ಇವುಗಳು ಕೇಂದ್ರ ಅಥವಾ ರಾಜ್ಯ ಸರ್ಕಾರಕ್ಕೆ ಅಥವಾ ಸ್ಥಳೀಯ ಅಥವಾ ಇತರ ಪ್ರಾಧಿಕಾರಕ್ಕೆ ಸೇರಿದ್ದೆಂದು ನಂಬಲಾಗಿದ್ದರೆ, ಅಥವಾ ಅಪರಾಧಿಯು ಯಾರೆಂಬುದು ತಿಳಿಯದಿದ್ದರೆ, ಹೆಸರಿಸಲಾದ ಅಧಿಕಾರಿಯು ಅಥವಾ ಅಧಿಕೃತಗೊಳಿಸಿದ ಅಧಿಕಾರಿಯು ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಗೆ ವರದಿ ಮಾಡತಕ್ಕದ್ದು.

(3) ಬಂಧಿತ ವ್ಯಕ್ತಿಗಳನ್ನು ವಶಪಡಿಸಿಕೊಳ್ಳುವಿಕೆಯ ಕಾರಣದ ಅಪರಾಧದ ಅಧಿವಿಚಾರಣೆಯನ್ನು ನಡೆಸಲು ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಮ್ಯಾಜಿಸ್ಟ್ರೇಟ ಮುಂದೆ ಹಾಜರು ಪಡಿಸತಕ್ಕದ್ದು.

**17. 16ನೇ ಪ್ರಕರಣದ ಅಡಿಯಲ್ಲಿ ಸ್ವಾಧೀನಪಡಿಸಿಕೊಂಡ ಸ್ವತ್ತನ್ನು ಬಿಡುಗಡೆ ಮಾಡುವುದಕ್ಕೆ ಅಧಿಕಾರ.–** ಸ್ವಾಧೀನಪಡಿಸಿಕೊಂಡ ಸ್ವತ್ತು, ಮ್ಯಾಜಿಸ್ಟ್ರೇಟರ ಅಥವಾ ಸಂದರ್ಭಾನುಸಾರವಾಗಿ ಪ್ರಾಧಿಕೃತ ಅಧಿಕಾರಿಯ ಮುಂದೆ ಅನುಕೂಲಕರವಾಗಿ ಹಾಜರುಪಡಿಸಲು ಸಾಧ್ಯವಿಲ್ಲದಿದ್ದರೆ, ಸ್ವತ್ತಿನ ಮಾಲೀಕನು ಬ್ಯಾಂಕ್ ಗ್ಯಾರಂಟಿಯನ್ನು ಮತ್ತು ಹಾಗೆ ಬಿಡುಗಡೆ ಮಾಡಲಾದ ಸ್ವತ್ತನ್ನು ಅಗತ್ಯಪಡಿಸಿದಾಗಲೆಲ್ಲಾ, ಸ್ವಾಧೀನಪಡಿಸಿಕೊಳ್ಳಲಾದುದಕ್ಕೆ ಸಂಬಂಧಿಸಿದಂತೆ ಅಪರಾಧದ ವಿಚಾರಣೆ ನಡೆಸಲು ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಮ್ಯಾಜಿಸ್ಟ್ರೇಟರ ಮುಂದೆ ಅಥವಾ ಪ್ರಾಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸುವ ಬಗ್ಗೆ ಒಂದು ಮುಚ್ಚಳಿಕೆ ಬಂಧ ಪತ್ರವನ್ನು ಬರೆದುಕೊಟ್ಟ ಮೇಲೆ, ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯು ಅದನ್ನು ಮಾಲೀಕನಿಗೆ ಬಿಡುಗಡೆ ಮಾಡಬಹುದು.

**18. ಪ್ರಾಧಿಕೃತ ಅಧಿಕಾರಿಯು ವಶಪಡಿಸಿಕೊಳ್ಳುವುದು.–** (1) 16ನೇ ಪ್ರಕರಣದ ಅಡಿಯಲ್ಲಿ ಸ್ವತ್ತನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವ, ಹೆಸರಿಸಲಾದ ಅಧಿಕಾರಿಯು ಅಥವಾ ಅಧಿಕೃತಗೊಳಿಸಿದ ಅಧಿಕಾರಿಯು ಯಾವುದೇ ಅನುಚಿತ ವಿಳಂಬವಿಲ್ಲದೆ ಪ್ರಾಧಿಕೃತ ಅಧಿಕಾರಿಯ ಮುಂದೆ ಸ್ವತ್ತನ್ನು ಹಾಜರುಪಡಿಸತಕ್ಕದ್ದು.

(2) ಸ್ವಾಧೀನಪಡಿಸಿಕೊಂಡ ಯಾವುದೇ ಸ್ವತ್ತನ್ನು ಪ್ರಾಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿದಾಗ ಮತ್ತು ಅಂಥ ಸ್ವತ್ತನ್ನು ಉಪಯೋಗಿಸಿಕೊಂಡು 25ನೇ ಪ್ರಕರಣದ ಅಡಿಯಲ್ಲಿ ದಂಡನೀಯವಾದ ಅಪರಾಧ ಮಾಡಲಾಗಿದೆ ಎಂದು ಅವನಿಗೆ ಮನವರಿಕೆಯಾದರೆ ಅಂಥ ಅಪರಾಧ ಘಟಿಸಿದುದಕ್ಕಾಗಿ ಪ್ರಾಸಿಕ್ಯೂಷನ್‌ನ್ನು ಹೂಡಿರಲಿ ಅಥವಾ ಹೂಡಿಲ್ಲದಿರಲಿ, ಪ್ರಾಧಿಕೃತ ಅಧಿಕಾರಿಯು, ಹಾಗೆ ಸ್ವಾಧೀನಕ್ಕೆ ತೆಗೆದುಕೊಂಡ ಸ್ವತ್ತನ್ನು ವಶಪಡಿಸಿಕೊಳ್ಳುವುದಕ್ಕೆ ಆದೇಶ ಮಾಡಬಹುದು.

(3) (2)ನೇ ಉಪಪ್ರಕರಣದ ಅಡಿಯಲ್ಲಿ ವಶಪಡಿಸಿಕೊಳ್ಳುವ ಆದೇಶವನ್ನು ಹೊರಡಿಸುವ ಪ್ರಾಧಿಕೃತ ಅಧಿಕಾರಿಯು, ವಶಪಡಿಸಿಕೊಂಡ ಸ್ವತ್ತನ್ನು ಅಥವಾ ಅದರ ಭಾಗವನ್ನು ಸಾರ್ವಜನಿಕ ಹರಾಜಿನಲ್ಲಿ ಮಾರಾಟಮಾಡುವುದು ಸಾರ್ವಜನಿಕ ಹಿತಾಸ್ತಕಿಯಲ್ಲಿ ಯುಕ್ತವಾಗಿದೆ ಎಂದು ಅಭಿಪ್ರಾಯಪಟ್ಟರೆ ಅವನು ಹಾಗೆ ಮಾರಾಟಮಾಡುವುದಕ್ಕೆ ಆದೇಶ ಮಾಡಬಹುದು.

(4) ಮೇಲೆ ಹೇಳಿದಂತೆ ಯಾವುದೇ ವಶಪಡಿಸಿಕೊಂಡ ಸ್ವತ್ತನ್ನು ಮಾರಾಟ ಮಾಡಿದಲ್ಲಿ, ಅದರ ಉತ್ಪನ್ನವನ್ನು, ಅಂಥ ಹರಾಜಿನ ವೆಚ್ಚಗಳನ್ನು ಅಥವಾ ಅದಕ್ಕೆ ಸಂಬಂಧಪಟ್ಟ ಇತರ ಪ್ರಾಸಂಗಿಕ ವೆಚ್ಚಗಳನ್ನು ಅದರಿಂದ ಕಡಿತ ಮಾಡಿಕೊಂಡು, (2)ನೇ ಉಪಪ್ರಕರಣದ ಅಡಿಯಲ್ಲಿ ವಶಪಡಿಸಿಕೊಳ್ಳಲು ಮಾಡಿದ ಆದೇಶವನ್ನು 20 ಅಥವಾ 21ನೇ ಪ್ರಕರಣದ ಅಡಿಯಲ್ಲಿಯ ಆದೇಶದ ಮೂಲಕ ತಳ್ಳಿಹಾಕಿದಲ್ಲಿ ಅಥವಾ ರದ್ದುಪಡಿಸಿದಲ್ಲಿ, ಅದರ ಮಾಲೀಕನಿಗೆ ಅಥವಾ ಅಂಥ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂತೆ, ಅದನ್ನು ಯಾರಿಂದ ವಶಪಡಿಸಿಕೊಳ್ಳಲಾಯಿತೋ ಆ ವ್ಯಕ್ತಿಗೆ ಸಂದಾಯ ಮಾಡತಕ್ಕದ್ದು.

**19. ವಶಪಡಿಸಿಕೊಳ್ಳುವುದಕ್ಕೆ ಮೊದಲು ಕಾರಣ ಕೇಳಿ ನೋಟೀಸು ನೀಡುವುದು.–** (1) ಯಾವುದೇ ಸಾಧನ, ಸಲಕರಣೆ, ಯಂತ್ರೋಪಕರಣ, ಉಪಕರಣ, ಸಾಧನಸಾಮಗ್ರಿ, ದೋಣಿ, ವಾಹನ ಅಥವಾ ಇತರ ಯಾವುದೇ ಸ್ವತ್ತನ್ನು ವಶಪಡಿಸಿಕೊಳ್ಳುವ ಯಾವುದೇ ಆದೇಶವನ್ನು, ಅದನ್ನು ಯಾರಿಂದ ವಶಪಡಿಸಿಕೊಳ್ಳಲಾಯಿತೋ ಆ ವ್ಯಕ್ತಿಗೆ ಲಿಖಿತ ನೋಟೀಸನ್ನು ಕೊಟ್ಟ ಹೊರತು ಮತ್ತು ಆತನ ಆಕ್ಷೇಪಣೆಗಳು, ಯಾವುದಾದರೂ ಇದ್ದರೆ, ಅವುಗಳನ್ನು ಪರಿಗಣಿಸಿದ ತರುವಾಯದ ಹೊರತು, 18ನೇ ಪ್ರಕರಣದ ಅಡಿಯಲ್ಲಿ ಅಂಥ ಆದೇಶವನ್ನು ಮಾಡತಕ್ಕದ್ದಲ್ಲ:

ಪರಂತು, ಮೋಟಾರು ವಾಹನವನ್ನು ವಶಪಡಿಸಿಕೊಳ್ಳುವ ಯಾವುದೇ ಆದೇಶವನ್ನು, ಅದರ ನೋಂದಾಯಿತ ಮಾಲೀಕರಿಗೆ ಲಿಖಿತ ನೋಟೀಸನ್ನು ಕೊಡುವುದು ಕಾರ್ಯಸಾಧ್ಯವೆಂದು ಪ್ರಾಧಿಕೃತ ಅಧಿಕಾರಿಯು ಅಭಿಪ್ರಾಯಪಟ್ಟರೆ, ಹಾಗೆ ನೋಟೀಸನ್ನು ಕೊಟ್ಟ ತರುವಾಯದ ಹೊರತು ಮತ್ತು ಆತನ ಆಕ್ಷೇಪಣೆಗಳು, ಯಾವುದಾದರೂ ಇದ್ದರೆ, ಅವುಗಳನ್ನು ಪರಿಗಣಿಸಿದ ಹೊರತು, ಮಾಡತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಉಪಬಂಧಗಳಿಗೆ ಬಾಧಕವಾಗದಂತೆ, ಯಾವುದೇ ಸಾಧನ, ಸಲಕರಣೆ, ಯಂತ್ರೋಪಕರಣ, ಉಪಕರಣ, ಸಾಧನಸಾಮಗ್ರಿ, ದೋಣಿ, ವಾಹನ ಅಥವಾ ಇತರ ಯಾವುದೇ ಸ್ವತ್ತನ್ನು ವಶಪಡಿಸಿಕೊಳ್ಳುವ ಯಾವುದೇ ಆದೇಶವನ್ನು ಅಂಥ ಸಾಧನದ, ಸಲಕರಣೆಯ, ಯಂತ್ರೋಪಕರಣದ, ಉಪಕರಣದ, ಸಾಧನಸಾಮಗ್ರಿಯ, ದೋಣಿಯ, ವಾಹನದ ಅಥವಾ ಇತರ ಯಾವುದೇ ಸ್ವತ್ತಿನ ಮಾಲೀಕನು ಅದನ್ನು ಸ್ವತಃ ಮಾಲೀಕನ, ಅವನ ಏಜೆಂಟನ, ಯಾರಾದರೂ ಇದ್ದಲ್ಲಿ, ಮತ್ತು ಸಾಧನ, ಸಲಕರಣೆ, ಯಂತ್ರೋಪಕರಣ, ಉಪಕರಣ, ಸಾಧನಸಾಮಗ್ರಿ, ದೋಣಿ, ವಾಹನ ಅಥವಾ ಇತರ ಯಾವುದೇ ಸ್ವತ್ತಿನ ಪ್ರಭಾರದಲ್ಲಿರುವ ವ್ಯಕ್ತಿಯ ತಿಳುವಳಿಕೆಗೆ ಬಾರದೆ ಅಥವಾ ಸಮ್ಮತಿಯಿಲ್ಲದೆ ಬಳಸಲಾಗಿದೆ ಎಂದು ಮತ್ತು ಅವರಲ್ಲಿ ಪ್ರತಿಯೊಬ್ಬರು ಅಂತಹ ಬಳಕೆಗೆ ಪ್ರತಿಯಾಗಿ ಎಲ್ಲಾ ಸೂಕ್ತ ಮತ್ತು ಅವಶ್ಯಕ ಮುಂಜಾಗ್ರತೆಗಳನ್ನು ತೆಗೆದುಕೊಂಡಿದ್ದಾರೆಂದು ಪ್ರಾಧಿಕೃತ ಅಧಿಕಾರಿಗೆ ಮನವರಿಕೆಯಾಗುವಂತೆ ರುಜುವಾತುಪಡಿಸಿದರೆ ಅಂಥ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.

**20. ಪುನರೀಕ್ಷಣೆ.–** ಮುಖ್ಯ ಕಾರ್ಯನಿರ್ವಹಣಾಧಿಕಾರಿಯು, 18ನೇ ಪ್ರಕರಣದ ಅಡಿಯಲ್ಲಿ ಪ್ರಾಧಿಕೃತ ಅಧಿಕಾರಿಯ ಆದೇಶದ ದಿನಾಂಕದಿಂದ ಮೂವತ್ತು ದಿನಗಳ ಅವಧಿಯು ಮೀರುವುದಕ್ಕೆ ಮೊದಲು, ಆ ಆದೇಶದ ದಾಖಲೆಗಳನ್ನು ಸ್ವತಃ ತರಿಸಿಕೊಳ್ಳಬಹುದು ಮತ್ತು ಪರಿಶೀಲಿಸಬಹುದು ಹಾಗೂ ಆತನು ಸೂಕ್ತವೆಂದು ಭಾವಿಸುವ ಅಂಥ ವಿಚಾರಣೆಯನ್ನು ಮಾಡಬಹುದು ಅಥವಾ ಅಂಥ ವಿಚಾರಣೆಯನ್ನು ಮಾಡುವುದಕ್ಕೆ ಕಾರಣರಾಗಬಹುದು ಮತ್ತು ಅಂಥ ಆದೇಶಗಳನ್ನು ಹೊರಡಿಸಬಹುದು.

**21. ಅಪೀಲು.–** (1) 18ನೇ ಪ್ರಕರಣ ಅಥವಾ 20ನೇ ಪ್ರಕರಣದ ಅಡಿಯಲ್ಲಿ ಹೊರಡಿಸಿದ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಅಂಥ ಆದೇಶವು ಆತನಿಗೆ ತಲುಪಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ, ಯಾವ ಆದೇಶದ ವಿರುದ್ಧ ಅಪೀಲನ್ನು ಸಲ್ಲಿಸಬೇಕಾಗಿದೆಯೋ ಆ ಆದೇಶದಲ್ಲಿ ಯಾವ ಸ್ವತ್ತನ್ನು ಅಭಿಗ್ರಹಿಸಲಾಗಿದೆಯೋ ಅಂಥ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವಂಥ ಸೆಷನ್ಸ್ ನ್ಯಾಯಾಧೀಶರಿಗೆ ಮೇಲ್ಮನವಿಯನ್ನು ಸಲ್ಲಿಸಬಹುದು ಮತ್ತು ಸೆಷನ್ಸ್ ನ್ಯಾಯಾಧೀಶರು, ಅಪೀಲುದಾರ ಮತ್ತು ಪ್ರಾಧಿಕೃತ ಅಧಿಕಾರಿಗೆ ತಮ್ಮ ಅಹವಾಲನ್ನು ಹೇಳಿಕೊಳ್ಳುವುದಕ್ಕೆ ಅವಕಾಶವನ್ನು ನೀಡಿದ ತರುವಾಯ, ಅಂಥ ಆದೇಶವನ್ನು ಸ್ಥಿರೀಕರಿಸಲು, ಮಾರ್ಪಡಿಸಲು ಅಥವಾ ರದ್ದುಪಡಿಸಲು ಅವಶ್ಯಕವೆಂದು ಭಾವಿಸಬಹುದಾದ ಅಂಥ ಆದೇಶವನ್ನು ಹೊರಡಿಸತಕ್ಕದ್ದು.

(2) ಈ ಪ್ರಕರಣದ ಅಡಿಯಲ್ಲಿ ಸೆಷನ್ಸ್ ನ್ಯಾಯಾಧೀಶರ ಆದೇಶವು ಅಂತಿಮವಾಗಿರತಕ್ಕದ್ದು ಮತ್ತು ಯಾವುದೇ ನ್ಯಾಯಾಲಯದಲ್ಲಿ ಅದನ್ನು ಪ್ರಶ್ನಿಸತಕ್ಕದ್ದಲ್ಲ.

**22. ಇತರ ಶಿಕ್ಷೆಗಳೊಂದಿಗೆ ಹಸ್ತಕ್ಷೇಪ ಮಾಡದ ವಶಪಡಿಸಿಕೊಳ್ಳುವಿಕೆ ಆದೇಶ.–** 18 ಅಥವಾ 20 ಅಥವಾ 21ನೇ ಪ್ರಕರಣಗಳ ಅಡಿಯಲ್ಲಿಯ ಯಾವುದೇ ವಶಪಡಿಸಿಕೊಳ್ಳುವಿಕೆಗೆ ಆದೇಶವು, ಈ ಅಧಿನಿಯಮದಡಿಯಲ್ಲಿ, ಅದರ ಮೂಲಕ ಕ್ರಮ ಜರುಗಿಸುವುದಕ್ಕೆ ಬದ್ಧನಾಗಿರುವ ವ್ಯಕ್ತಿಗೆ ಶಿಕ್ಷೆಯ ವಿಧಿಸುವಿಕೆಯನ್ನು ಪ್ರತಿಬಂಧಿಸತಕ್ಕದ್ದಲ್ಲ.

**23. ಸ್ವತ್ತು ಸರ್ಕಾರದಲ್ಲಿ ನಿಹಿತವಾದಾಗ ವಶಪಡಿಸಿಕೊಳ್ಳುವಿಕೆ.–** 18 ಅಥವಾ 20 ಅಥವಾ 21ನೇ ಪ್ರಕರಣಗಳ ಅಡಿಯಲ್ಲಿ ಯಾವುದೇ ಸ್ವತ್ತಿನ ವಶಪಡಿಸಿಕೊಳ್ಳುವಿಕೆಗೆ ಆದೇಶವನ್ನು ಹೊರಡಿಸಿದಾಗ ಮತ್ತು ಅಂಥ ಆದೇಶವು, ಅಂಥ ಸ್ವತ್ತಿನ ಪೂರ್ಣ ಅಥವಾ ಅದರ ಭಾಗದ ಸಂಬಂಧದಲ್ಲಿ ಅಂತಿಮವಾದಾಗ, ಅಂಥ ಸ್ವತ್ತು ಅಥವಾ ಸಂದರ್ಭಾನುಸಾರವಾಗಿ ಅದರ ಭಾಗವು (ಅಥವಾ 18ನೇ ಪ್ರಕರಣದ (3)ನೇ ಉಪಪ್ರಕರಣದ ಅಡಿಯಲ್ಲಿ ಇದನ್ನು ಮಾರಾಟ ಮಾಡಿದಲ್ಲಿ ಅದರ ಉತ್ಪನ್ನವು) ಅದರ ಎಲ್ಲಾ ಋಣಭಾರದಿಂದ ಮುಕ್ತವಾಗಿ ಸರ್ಕಾರದಲ್ಲಿ ನಿಹಿತವಾಗಿರತಕ್ಕದ್ದು:

ಪರಂತು, ಯಾವೊಬ್ಬ ವ್ಯಕ್ತಿಗೆ ತನ್ನ ಅಹವಾಲನ್ನು ಹೇಳಿಕೊಳ್ಳುವ ಅವಕಾಶವನ್ನು ನೀಡಿದ ಹೊರತು ಈ ಪ್ರಕರಣದಡಿಯಲ್ಲಿ ಅಂಥ ಯಾವುದೇ ಪ್ರತಿಕೂಲ ಪ್ರಭಾವದ ಆದೇಶವನ್ನು ಹೊರಡಿಸತಕ್ಕದ್ದಲ್ಲ.

**24. ಒತ್ತುವರಿಯನ್ನು ತೆರವುಗೊಳಿಸುವುದಕ್ಕೆ ಅಧಿಕಾರ.–** (1) ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಹೊರಹಾಕುವಿಕೆ) ಅಧಿನಿಯಮ, 1974ರಲ್ಲಿ (1974ರ ಕರ್ನಾಟಕ ಅಧಿನಿಯಮ 32) ಏನೇ ಒಳಗೊಂಡಿದ್ದರೂ, ಯಾವುದೇ ಸರೋವರದ ಭೂಮಿ ಅಥವಾ ಅದರ ಭಾಗವನ್ನು ಅನಧಿಕೃತವಾಗಿ ಅಧಿಭೋಗದಲ್ಲಿಟ್ಟುಕೊಂಡಿದ್ದಾನೆಂದು ಕಂಡುಬರುವಂಥ ಯಾವೊಬ್ಬ ವ್ಯಕ್ತಿಯನ್ನು, ಈ ಅಧಿನಿಯಮದ ಯಾವುದೇ ಇತರ ಉಪಬಂಧಗಳ ಅಡಿಯಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಅಡಿಯಲ್ಲಿ ಆತನ ವಿರುದ್ಧ ಕೈಗೊಳ್ಳಬಹುದಾದ ಅಂಥ ಯಾವುದೇ ಇತರ ಕ್ರಮಕ್ಕೆ ಬಾಧಕವಾಗದಂತೆ, ಹೆಸರಿಸಲಾದ ಅಧಿಕಾರಿಯು ಅಥವಾ ಈ ಬಗ್ಗೆ ಪ್ರಾಧಿಕಾರದಿಂದ ಪ್ರಾಧಿಕೃತನಾದ ಯಾವೊಬ್ಬ ಇತರ ಅಧಿಕಾರಿಯು ಕ್ಷಿಪ್ರವಾಗಿ ಹೊರಹಾಕತಕ್ಕದ್ದು:

ಪರಂತು, ಯಾವೊಬ್ಬ ವ್ಯಕ್ತಿಯನ್ನು, ಆತನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ಹೊರತು, ಈ ಉಪಪ್ರಕರಣದಡಿಯಲ್ಲಿ ಹೊರಹಾಕತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಿದ ಹೊರಹಾಕುವ ಪ್ರತಿಯೊಂದು ಆದೇಶವು ಲಿಖಿತದಲ್ಲಿರತಕ್ಕದ್ದು ಮತ್ತು ಸರೋವರದ ಭೂಮಿಯನ್ನು ಅನಧಿಕೃತವಾಗಿ ಅಧಿಭೋಗಿಸುತ್ತಿರುವ ವ್ಯಕ್ತಿಗೆ ಅದರ ಪ್ರತಿಯನ್ನು ನೀಡುವ ಅಥವಾ ಒಪ್ಪಿಸುವ ಮೂಲಕ ಅಥವಾ ನೋಂದಾಯಿತ ಅಂಚೆಯ ಮೂಲಕ ಅದರ ಪ್ರತಿಯನ್ನು ರವಾನಿಸುವ ಮೂಲಕ ಅಥವಾ ಆತನು, ಇದನ್ನು ಸ್ವೀಕರಿಸಲು ನಿರಾಕರಿಸಿದಲ್ಲಿ ಅಥವಾ ಜಾರಿಯನ್ನು ತಪ್ಪಿಸಿದಲ್ಲಿ, ಆತನ ಅಧಿಭೋಗದಲ್ಲಿರುವ ಸ್ವತ್ತಿನ ಪ್ರಮುಖ ಭಾಗದ ಮೇಲೆ ಅಂಟಿಸುವ ಮೂಲಕ ಅಥವಾ ಆ ಪ್ರದೇಶದಲ್ಲಿ ವ್ಯಾಪಕ ಪ್ರಸಾರದಲ್ಲಿರುವ ವೃತ್ತ ಪತ್ರಿಕೆಯಲ್ಲಿ ಪ್ರಕಟಿಸುವ ಮೂಲಕ ಜಾರಿಮಾಡತಕ್ಕದ್ದು.

(3) ಸರೋವರದ ಭೂಮಿಯಲ್ಲಿ ಬೆಳೆದಿರುವ ಮರಗಳನ್ನು ಒಳಗೊಂಡಂತೆ ಯಾವುದೇ ಬೆಳೆಯನ್ನು ಮತ್ತು ಅನಧಿಕೃತ ಅಧಿಭೋಗದಾರನು ಅದರ ಮೇಲೆ ನಿರ್ಮಿಸಿರುವ ಯಾವುವೇ ಕಟ್ಟಡಗಳು ಅಥವಾ ಇತರ ನಿರ್ಮಿತಿಗಳನ್ನು, (1)ನೇ ಉಪಪ್ರಕರಣದಲ್ಲಿ ಹೊರಹಾಕುವಿಕೆಯ ಆದೇಶವನ್ನು ಹೊರಡಿಸಿದ ಮೂವತ್ತು ದಿನಗಳೊಳಗೆ ಆತನು ತೆರವುಗೊಳಿಸದಿದ್ದಲ್ಲಿ, ಮುಟ್ಟುಗೋಲು ಹಾಕಿಕೊಳ್ಳಲು ಅಥವಾ ಕ್ಷಿಪ್ರವಾಗಿ ತೆರವುಗೊಳಿಸಲು ಬದ್ಧವಾಗಿರತಕ್ಕದ್ದು.

(4) (3)ನೇ ಉಪಪ್ರಕರಣದ ಅಡಿಯಲ್ಲಿ ಮುಟ್ಟುಗೋಲನ್ನು ಹಾಕಿಕೊಂಡ ಯಾವುದೇ ಸ್ವತ್ತು ಪ್ರಾಧಿಕಾರದಲ್ಲಿ ನಿಹಿತವಾಗಿರತಕ್ಕದ್ದು ಮತ್ತು ಯುಕ್ತವೆಂದು ಭಾವಿಸಬಹುದಾದ ಅಂಥ ರೀತಿಯಲ್ಲಿ ಇದನ್ನು ವಿಲೆ ಮಾಡಬಹುದು ಮತ್ತು ಯಾವುದೇ ಬೆಳೆ, ಮರಗಳು, ಕಟ್ಟಡಗಳು ಅಥವಾ ಇತರ ನಿರ್ಮಿತಿಗಳನ್ನು ತೆಗೆದುಹಾಕುವುದಕ್ಕಾಗಿನ ಖರ್ಚನ್ನು ಮತ್ತು ಸರೋವರವನ್ನು ಅದರ ಪೂರ್ವಸ್ಥಿತಿಗೆ ತರಲು ಭರಿಸುವ ವೆಚ್ಚವನ್ನು, ಹೊರಹಾಕಿದ ವ್ಯಕ್ತಿಯಿಂದ ಭೂ ಕಂದಾಯದ ಬಾಕಿಯಂತೆ ಅಥವಾ ನಿಯಮಿಸಬಹುದಾದ ಅಂಥ ಯಾವುದೇ ಇತರ ರೀತಿಯಲ್ಲಿ ವಸೂಲಿ ಮಾಡತಕ್ಕದ್ದು.

(5) ಹೆಸರಿಸಲಾದ ಅಧಿಕಾರಿಯ ಅಥವಾ (1)ನೇ ಉಪಪ್ರಕರಣದಡಿಯಲ್ಲಿ ಪ್ರಾಧಿಕಾರವು ಪ್ರಾಧಿಕೃತಗೊಳಿಸಿದ ಯಾವೊಬ್ಬ ಇತರ ಅಧಿಕಾರಿಯ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಆದೇಶದ ದಿನಾಂಕದಿಂದ ಮೂವತ್ತು ದಿನಗಳ ಒಳಗೆ, ಅಂಥ ಆದೇಶದ ವಿರುದ್ಧ ಅಪೀಲನ್ನು, ನಿಯಮಿಸಬಹುದಾದಂಥ ರೀತಿಯಲ್ಲಿ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ಸಲ್ಲಿಸಬಹುದು ಮತ್ತು (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಿದ ಆದೇಶವು, ಅಂಥ ಅಪೀಲಿನಲ್ಲಿನ ನಿರ್ಣಯಕ್ಕೆ ಒಳಪಟ್ಟು ಅಂತಿಮವಾಗಿರತಕ್ಕದ್ದು.

(6) ಯಾವುದೇ ಸರೋವರದ ಒತ್ತುವರಿಯನ್ನು ತೆಗೆದುಹಾಕಲು ಪ್ರಾಧಿಕಾರಕ್ಕೆ ಅಗತ್ಯವಾಗಬಹುದಾದ ನೆರವು ಮತ್ತು ಸಹಾಯವನ್ನು ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು ನೀಡತಕ್ಕದ್ದು.

## ಅಧ್ಯಾಯ – IV

## ದಂಡಗಳು ಮತ್ತು ಪ್ರಕ್ರಿಯೆಗಳು

**25. 14ನೇ ಪ್ರಕರಣದ ಉಲ್ಲಂಘನೆಗೆ ದಂಡ.–** 14ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾವೊಬ್ಬ ವ್ಯಕ್ತಿಯು, ಮೂರು ವರ್ಷಗಳಿಗಿಂತ ಕಡಿಮೆಯಿಲ್ಲದ ಆದರೆ ಐದು ವರ್ಷಗಳವರೆಗೆ ವಿಸ್ತರಿಸಬಹುದಾದ ಅಂಥ ಅವಧಿಯ ಕಾರಾವಾಸದಿಂದ ಮತ್ತು ಹತ್ತು ಸಾವಿರ ರೂಪಾಯಿಗಳಿಗೆ ಕಡಿಮೆಯಿಲ್ಲದ ಆದರೆ ಇಪ್ಪತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಅಂಥ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.

**26. ಯಾರೇ ಅಧಿಕಾರಿಗಳಿಗೆ ಅಡ್ಡಿಯುಂಟುಮಾಡುವುದಕ್ಕಾಗಿ ದಂಡ.–** ಯಾವೊಬ್ಬನು,–

(1) ಯಾವೊಬ್ಬ ಹೆಸರಿಸಲಾದ ಅಧಿಕಾರಿಯ, ಪ್ರಾಧಿಕೃತ ಅಧಿಕಾರಿಯ, ಅಧಿಕೃತಗೊಂಡ ಅಧಿಕಾರಿಯ ಅಥವಾ ಪ್ರಾಧಿಕಾರದ ಅಥವಾ ಪ್ರಾಧಿಕೃತಗೊಳಿಸಿದ ಅಥವಾ ಹೆಸರಿಸಲಾದ ಅಧಿಕಾರಿಯ ಆದೇಶಗಳು ಅಥವಾ ನಿರ್ದೇಶನಗಳ ಅಡಿಯಲ್ಲಿ ಕಾರ್ಯನಿರ್ವಹಿಸುವ ಯಾವೊಬ್ಬ ವ್ಯಕ್ತಿಯನ್ನು, ಈ ಅಧಿನಿಯಮ ಅಥವಾ ಅದರಡಿಯಲ್ಲಿ ರಚಿಸಿದ ನಿಯಮಗಳು ಅಥವಾ ವಿನಿಯಮಗಳ ಅಡಿಯಲ್ಲಿ ಆತನ ಅಧಿಕಾರವನ್ನು ಚಲಾಯಿಸುವುದನ್ನು, ಆತನ ಪ್ರಕಾರ್ಯಗಳನ್ನು ನಿರ್ವಹಿಸುವುದನ್ನು ಅಥವಾ ಆತನ ಕರ್ತವ್ಯಗಳನ್ನು ನೆರವೇರಿಸುವುದನ್ನು ಅಡ್ಡಿಪಡಿಸುತ್ತಾನೊ; ಅಥವಾ

(2) ಪ್ರಾಧಿಕಾರದ ಯಾವುವೇ ಕಾಮಗಾರಿಗಳನ್ನು ಅಥವಾ ಸ್ವತ್ತನ್ನು ಹಾನಿಪಡಿಸುತ್ತಾನೊ; ಅಥವಾ

(3) ಪ್ರಾಧಿಕಾರದ ಅಥವಾ ಯಾವೊಬ್ಬ ಪ್ರಾಧಿಕೃತ ಅಧಿಕಾರಿಯ ಅಥವಾ ಹೆಸರಿಸಲಾದ ಅಧಿಕಾರಿಯ ನಿರ್ದೇಶನಗಳ ಮೂಲಕ ಅಥವಾ ಅವುಗಳ ಅಡಿಯಲ್ಲಿ ಭೂಮಿಯಲ್ಲಿ ನಿಲ್ಲಿಸಿರುವ ಯಾವುದೇ ಸ್ತಂಭ, ಕಂಬ ಅಥವಾ ಗೂಟವನ್ನು ಅಥವಾ ಸಿದ್ಧಪಡಿಸಿದ, ಬರೆದ ಅಥವಾ ಇಟ್ಟಿರುವ ಯಾವುದೇ ನೋಟೀಸನ್ನು ಅಥವಾ ಇತರೆ ವಿಷಯವನ್ನು ಹಾಳು ಮಾಡುತ್ತಾನೊ, ಕೆಡವುತ್ತಾನೊ, ತೆಗೆದುಹಾಕುತ್ತಾನೊ, ಹಾನಿಗೊಳಿಸುತ್ತಾನೊ ಅಥವಾ ವಿರೂಪಗೊಳಿಸುತ್ತಾನೊ,

– ಆತನು ಒಂದು ವರ್ಷಕ್ಕೆ ವಿಸ್ತರಿಸಬಹುದಾದಂಥ ಅವಧಿಯ ಕಾರವಾಸದಿಂದ ಮತ್ತು ಹತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.

**27. ಸರೋವರದ ಕಾನೂನುಬಾಹಿರ ಅಧಿಭೋಗವನ್ನು ವರದಿ ಮಾಡಲು ತಪ್ಪಿದ್ದಕ್ಕಾಗಿ ದಂಡ.–** ಸರೋವರದ ಕಾನೂನುಬಾಹಿರ ಅಧಿಭೋಗದಾರಿಕೆ ಅಥವಾ ಬಳಕೆ ಅಥವಾ ಸರೋವರದ ನಿರ್ವಹಣೆ ಮತ್ತು ಸಂರಕ್ಷಣೆಯನ್ನು ವರದಿ ಮಾಡುವ ಹೊಣೆಗಾರಿಕೆಯನ್ನು ವಹಿಸಿಕೊಟ್ಟಿರುವ ಪ್ರಾಧಿಕಾರದ ಅಥವಾ ಸರ್ಕಾರದ ಅಥವಾ ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರದ ಒಬ್ಬ ಅಧಿಕಾರಿ ಅಥವಾ ನೌಕರನು, ಅಂಥ ಕಾನೂನುಬಾಹಿರ ಅಧಿಭೋಗದಾರಿಕೆಯನ್ನು ವರದಿ ಮಾಡಲು ಅಥವಾ ತೆರವುಗೊಳಿಸಲು ಕ್ರಮ ಕೈಗೊಳ್ಳಲು ಅಥವಾ ಸರೋವರವನ್ನು ನಿರ್ವಹಿಸಲು ಅಥವಾ ರಕ್ಷಿಸಲು ತಪ್ಪಿದಲ್ಲಿ, ಒಂದು ವರ್ಷದ ಅವಧಿಯವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಮತ್ತು ಹತ್ತು ಸಾವಿರ ರೂಪಾಯಿಗಳ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**28. ಅಧಿನಿಯಮದ ಕೆಲವು ಉಪಬಂಧಗಳ ಉಲ್ಲಂಘನೆಗಾಗಿ ದಂಡ.–** ಯಾವೊಬ್ಬ ವ್ಯಕ್ತಿಯು, ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಲಾದ, ಯಾವುವೇ ನಿಯಮಗಳನ್ನು ಅಥವಾ ವಿನಿಯಮಗಳನ್ನು, ನಿರ್ದಿಷ್ಟ ದಂಡವನ್ನು ಕಲ್ಪಿಸದಿರದ ಯಾವುವೇ ಇತರ ಉಪಬಂಧಗಳನ್ನು ಉಲ್ಲಂಘಿಸಿದರೆ ಅಥವಾ ಈ ಅಧಿನಿಯಮದ ಅಡಿಯಲ್ಲಿ ನೀಡಿರುವ ಯಾವುದೇ ಆದೇಶ ಅಥವಾ ನಿರ್ದೇಶನವನ್ನು ಪಾಲಿಸಲು ತಪ್ಪಿದರೆ, ಆತನು ಒಂದು ವರ್ಷದ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಮತ್ತು ಐದು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**29. 25ನೇ ಪ್ರಕರಣದ ಅಡಿಯಲ್ಲಿ ಹಿಂದಿನ ಅಪರಾಧ ನಿರ್ಣಯದ ತರುವಾಯ ಹೆಚ್ಚಿಸಲಾದ ದಂಡ.–** 25ನೇ ಪ್ರಕರಣದ ಅಡಿಯಲ್ಲಿ ಯಾವುದೇ ಅಪರಾಧಕ್ಕಾಗಿ ಅಪರಾಧ ನಿರ್ಣೀತನಾದ ಯಾವೊಬ್ಬ ವ್ಯಕ್ತಿಯು, ಅದೇ ಉಪಬಂಧದ ಉಲ್ಲಂಘನೆಯನ್ನು ಒಳಗೊಳ್ಳುವ ಒಂದು ಅಪರಾಧಕ್ಕೆ ಪುನಃ ತಪ್ಪಿತಸ್ಥನೆಂದು ಕಂಡುಬಂದಲ್ಲಿ, ಎರಡನೇ ಮತ್ತು ತರುವಾಯದ ಪ್ರತಿಯೊಂದು ನಿರ್ಣೀತ ಅಪರಾಧಕ್ಕೆ ಐದು ವರ್ಷಗಳಿಗೆ ಕಡಿಮೆಯಲ್ಲದ ಅವಧಿಯ ಕಾರಾವಾಸದಿಂದ ಮತ್ತು ಒಂದು ಲಕ್ಷ ರೂಪಾಯಿಗಳ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**30. ಅಪರಾಧಕ್ಕೆ ದುಷ್ಪ್ರೇರಣೆ.–** ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ದಂಡನೀಯವಾಗುವ ಯಾವುದೇ ಅಪರಾಧವನ್ನು ದುಷ್ಪ್ರೇರಿಸುವ ಅಥವಾ ಯಾವುದೇ ಅಂಥ ಅಪರಾಧವನ್ನು ಮಾಡುವುದಕ್ಕೆ ಪ್ರಯತ್ನಿಸಿದ ಯಾವೊಬ್ಬ ವ್ಯಕ್ತಿಯು, ಅಂಥ ಅಪರಾಧಕ್ಕಾಗಿ ಆರು ತಿಂಗಳ ಕಾರಾವಾಸದಿಂದ ಈ ಅಧಿನಿಯಮದ ಅಡಿಯಲ್ಲಿ ಅಥವಾ ಅದರ ಮೂಲಕ ಉಪಬಂಧಿಸಿದ ದಂಡದಿಂದ ದಂಡಿತನಾಗತಕ್ಕದ್ದು.

**31. ಕಂಪೆನಿಗಳಿಂದ/ನಿವಾಸಿ ಸಂಘದಿಂದ ಅಪರಾಧಗಳು.–** (1) ಈ ಅಧಿನಿಯಮದ ಅಡಿಯಲ್ಲಿಯ ಒಂದು ಅಪರಾಧವನ್ನು ಒಂದು ಕಂಪೆನಿಯು/ನಿವಾಸಿಗಳ ಸಂಘವು ಮಾಡಿದ್ದಲ್ಲಿ, ಅಪರಾಧವನ್ನು ಮಾಡಿದ ಸಮಯದಲ್ಲಿ ಪ್ರಭಾರದಲ್ಲಿದ್ದ ಮತ್ತು ಕಂಪೆನಿಯ/ನಿವಾಸಿಗಳ ಸಂಘದ ವ್ಯವಹಾರವನ್ನು ನಡೆಸಲು ಜವಾಬ್ದಾರನಾದ ಪ್ರತಿಯೊಬ್ಬ ವ್ಯಕ್ತಿಯನ್ನು ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ಆತನ ವಿರುದ್ಧ ಕೈಗೊಳ್ಳುವ ಕ್ರಮಗಳಿಗೆ ಆತನು ಗುರಿಯಾಗತಕ್ಕದ್ದು ಮತ್ತು ಅದಕ್ಕನುಸಾರವಾಗಿ ದಂಡನೀಯನಾಗತಕ್ಕದ್ದು:

ಪರಂತು, ಈ ಉಪಪ್ರಕರಣದಲ್ಲಿ ಇರುವುದಾವುದೂ, ಅಂಥ ವ್ಯಕ್ತಿಯು ತನ್ನ ತಿಳುವಳಿಕೆಗೆ ಬಾರದೇ ಅಪರಾಧವು ನಡೆದಿದೆ ಅಥವಾ ಅಂಥ ಅಪರಾಧವು ನಡೆಯುವುದನ್ನು ತಪ್ಪಿಸಲು ಎಲ್ಲಾ ಯುಕ್ತ ಕಾರ್ಯತತ್ಪರತೆಯನ್ನು ತಾನು ಚಲಾಯಿಸಿದ್ದೇನೆಂದು ರುಜುವಾತುಪಡಿಸಿದಲ್ಲಿ, ಈ ಅಧಿನಿಯಮದಲ್ಲಿ ಉಪಬಂಧಿಸಿದ ಯಾವುದೇ ದಂಡಕ್ಕೆ ಆತನನ್ನು ಹೊಣೆ ಮಾಡತಕ್ಕದ್ದಲ್ಲ.

**ವಿವರಣೆ:–** ಈ ಪ್ರಕರಣದ ಉದ್ದೇಶಗಳಿಗಾಗಿ,

(ಎ) 'ಕಂಪೆನಿ' ಎಂದರೆ, ಯಾವುದೇ ನಿಗಮಿತ ನಿಕಾಯ ಮತ್ತು ಒಂದು ಫರ್ಮ್ ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ;

(ಬಿ) 'ನಿರ್ದೇಶಕ' ಎಂದರೆ, ಒಂದು ಫರ್ಮ್‌ನ ಸಂಬಂಧದಲ್ಲಿ ಫರ್ಮ್‌ನಲ್ಲಿಯ ಪಾಲುದಾರ, ಸಂಘದ ಸಂಬಂಧದಲ್ಲಿ, ಸಂಘದ ಕಾರ್ಯದರ್ಶಿ ಅಥವಾ ಸಂದರ್ಭಾನುಸಾರವಾಗಿ ಅಧ್ಯಕ್ಷ.

**32. ಸರ್ಕಾರಿ ಇಲಾಖೆ ಮುಂತಾದವುಗಳಿಂದ ಅಪರಾಧಗಳು.–** ಈ ಅಧಿನಿಯಮದ ಅಡಿಯಲ್ಲಿಯ ಒಂದು ಅಪರಾಧವನ್ನು ಸರ್ಕಾರದ ಯಾವುದೇ ಇಲಾಖೆ ಅಥವಾ ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರವು ಮಾಡಿದ್ದಲ್ಲಿ, ಸರ್ಕಾರದ ಇಲಾಖೆಯ ಮುಖ್ಯಸ್ಥ ಅಥವಾ ಅಂಥ ಸ್ಥಳೀಯ ಅಥವಾ ಸಂದರ್ಭಾನುಸಾರವಾಗಿ ಇತರ ಪ್ರಾಧಿಕಾರದ ಪ್ರಭಾರದಲ್ಲಿರುವ (ಯಾವುದೇ ಹೆಸರಿನಿಂದ ಕರೆಯಲ್ಪಡುವ) ಮುಖ್ಯ ಕಾರ್ಯನಿರ್ವಹಣಾಧಿಕಾರಿಯನ್ನು ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ಆತನ ವಿರುದ್ಧ ಕೈಗೊಳ್ಳಲಾಗುವ ಕ್ರಮಗಳಿಗೆ ಆತನು ಗುರಿಯಾಗತಕ್ಕದ್ದು ಮತ್ತು ಅದಕ್ಕನುಸಾರವಾಗಿ ದಂಡನೀಯನಾಗತಕ್ಕದ್ದು:

ಪರಂತು, ಈ ಪ್ರಕರಣದಲ್ಲಿ ಇರುವುದಾವುದೂ, ಅಂಥ ಇಲಾಖೆಯ ಮುಖ್ಯಸ್ಥ ಅಥವಾ ಸಂದರ್ಭಾನುಸಾರವಾಗಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ತನ್ನ ತಿಳುವಳಿಕೆಗೆ ಬಾರದೇ ಅಪರಾಧವು ನಡೆದಿದೆ ಮತ್ತು ಅಂಥ ಅಪರಾಧ ನಡೆಯುವುದನ್ನು ತಪ್ಪಿಸಲು ಎಲ್ಲಾ ಯುಕ್ತ ಕಾರ್ಯತತ್ಪರತೆಯನ್ನು ತಾನು ಚಲಾಯಿಸಿದ್ದೇನೆಂದು ಸಾಬೀತುಪಡಿಸಿದಲ್ಲಿ, ಈ ಅಧಿನಿಯಮದಲ್ಲಿ ಉಪಬಂಧಿಸಿದ ಯಾವುದೇ ದಂಡಕ್ಕೆ ಆತನನ್ನು ಹೊಣೆ ಮಾಡತಕ್ಕದ್ದಲ್ಲ.

**33. ವಾರಂಟು ಇಲ್ಲದೆ ದಸ್ತಗಿರಿ.–** (1) ಯಾವೊಬ್ಬ ವ್ಯಕ್ತಿಯು, ಈ ಅಧಿನಿಯಮದ ಅಡಿಯಲ್ಲಿ ಒಂದು ವರ್ಷದ ಕಾರಾವಾಸದಿಂದ ದಂಡನೀಯವಾದ ಯಾವುದೇ ಅಪರಾಧವನ್ನು ಎಸಗಿದ್ದಾನೆಂದು ಯುಕ್ತವಾಗಿ ಸಂದೇಹಿತನಾಗಿದ್ದು, ಆತನು ತನ್ನ ಹೆಸರು ಮತ್ತು ನಿವಾಸದ ವಿಳಾಸವನ್ನು ಕೊಡಲು ನಿರಾಕರಿಸಿದಲ್ಲಿ ಅಥವಾ ಸುಳ್ಳೆಂದು ನಂಬುವುದಕ್ಕೆ ಕಾರಣವಿರುವ ಹೆಸರು ಅಥವಾ ನಿವಾಸದ ವಿಳಾಸವನ್ನು ನೀಡಿದ್ದಲ್ಲಿ ಅಥವಾ ಆತನು ತಲೆಮರೆಸಿಕೊಳ್ಳುತ್ತಾನೆಂದು ನಂಬಲು ಕಾರಣವಿದ್ದಲ್ಲಿ ಆ ವ್ಯಕ್ತಿಯನ್ನು ಯಾವೊಬ್ಬ ಪೊಲೀಸ್ ಅಧಿಕಾರಿ ಅಥವಾ ಹೆಸರಿಸಲಾದ ಅಧಿಕಾರಿ ಅಥವಾ ಅಧಿಕೃತ ಅಧಿಕಾರಿಯು, ಮ್ಯಾಜಿಸ್ಟ್ರೇಟರನ ಆದೇಶಗಳಿಲ್ಲದೆ ಮತ್ತು ವಾರಂಟು ಇಲ್ಲದೆ ದಸ್ತಗಿರಿ ಮಾಡಬಹುದು.

(2) ಈ ಪ್ರಕರಣದ ಅಡಿಯಲ್ಲಿ ದಸ್ತಗಿರಿಯಾದ ಯಾವೊಬ್ಬ ವ್ಯಕ್ತಿಗೆ, ಆದಷ್ಟು ಬೇಗನೆ, ಅಂಥ ದಸ್ತಗಿರಿಯ ಆಧಾರಗಳ ಮಾಹಿತಿಯನ್ನು ನೀಡತಕ್ಕದ್ದು ಮತ್ತು ದಸ್ತಗಿರಿಯ ಸ್ಥಳದಿಂದ ಮ್ಯಾಜಿಸ್ಟ್ರೇಟರನ ನ್ಯಾಯಾಲಯಕ್ಕೆ ಪ್ರಯಾಣಕ್ಕಾಗಿ ಅವಶ್ಯವಾಗುವ ಸಮಯವನ್ನು ಹೊರತುಪಡಿಸಿ, ಅಂಥ ದಸ್ತಗಿರಿಯ ಇಪ್ಪತ್ನಾಲ್ಕು ಗಂಟೆಯೊಳಗೆ ಆ ಪ್ರಕರಣದ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಹತ್ತಿರದ ಮ್ಯಾಜಿಸ್ಟ್ರೇಟರನ ಎದುರಿಗೆ ಹಾಜರುಪಡಿಸತಕ್ಕದ್ದು ಮತ್ತು ಅಂಥ ವ್ಯಕ್ತಿಯನ್ನು ಮ್ಯಾಜಿಸ್ಟ್ರೇಟರನ ಪ್ರಾಧಿಕಾರವಿಲ್ಲದೆ ಸದರಿ ಅವಧಿ ಮೀರಿ ಅಭಿರಕ್ಷೆಯಲ್ಲಿ ಬಂಧಿಸಿಡತಕ್ಕದ್ದಲ್ಲ.

**34. ದಸ್ತಗಿರಿಯಾದ ಒಬ್ಬ ವ್ಯಕ್ತಿಯನ್ನು ಬಾಂಡ್ ಮೇಲೆ ಬಿಡುಗಡೆಗೊಳಿಸುವ ಅಧಿಕಾರ.–** 33ನೇ ಪ್ರಕರಣದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯನ್ನು ದಸ್ತಗಿರಿ ಮಾಡಿದ ಯಾವೊಬ್ಬ ಪೊಲೀಸ್ ಅಧಿಕಾರಿ ಅಥವಾ ಹೆಸರಿಸಲಾದ ಅಧಿಕಾರಿಯು, ಆ ಪ್ರಕರಣದ ಅಧಿಕಾರವ್ಯಾಪ್ತಿಯುಳ್ಳ ಮ್ಯಾಜಿಸ್ಟ್ರೇಟರನ ಮುಂದೆ ಅಥವಾ ಹತ್ತಿರದ ಪೊಲೀಸ್ ಠಾಣೆಯ ಪ್ರಭಾರದಲ್ಲಿರುವ ಅಧಿಕಾರಿಯ ಮುಂದೆ ಹಾಜರಾಗಲು ಹಾಗೆ ಅಗತ್ಯಪಡಿಸಿದರೆ ಮತ್ತು ಆಗ ಅಂಥ ವ್ಯಕ್ತಿಯು, ಸೂಕ್ತ ಭದ್ರತೆಯೊಂದಿಗೆ ಒಂದು ಬಾಂಡ್ ಅನ್ನು ಬರೆದುಕೊಟ್ಟಲ್ಲಿ, ಆ ವ್ಯಕ್ತಿಯನ್ನು ಬಿಡುಗಡೆಗೊಳಿಸಬಹುದು.

**35. ಅಪರಾಧಗಳ ಸಂಜ್ಞೇಯತೆ.–** ಈ ಅಧಿನಿಯಮದ ಅಡಿಯಲ್ಲಿ ಅಪರಾಧಗಳು ಸಂಜ್ಞೇಯವಾಗಿರತಕ್ಕದ್ದು.

## ಅಧ್ಯಾಯ – V

## ಪ್ರಾಧಿಕಾರದ ನಿಧಿ, ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ

**36. ಪ್ರಾಧಿಕಾರದ ನಿಧಿ.–** (1) ಸರ್ಕಾರವು ಕಾಲಕಾಲಕ್ಕೆ ಮೊತ್ತವನ್ನು ಪಾವತಿಸಬಹುದಾದ, ಅಂಥ ತನ್ನದೇ ಆದ ಒಂದು ನಿಧಿಯನ್ನು ಪ್ರಾಧಿಕಾರವು ಹೊಂದಿರತಕ್ಕದು ಮತ್ತು ಎಲ್ಲಾ ಇತರ ಸ್ವೀಕೃತಿಗಳನ್ನು (ದಾನಗಳು, ಅನುದಾನ, ದಂಡಗಳು, ಶುಲ್ಕಗಳು, ಚಾರ್ಜುಗಳು ಅಥವಾ ಅನ್ಯಥಾ) ಪ್ರಾಧಿಕಾರದ ನಿಧಿಗೆ ವರ್ಗಾಯಿಸತಕ್ಕದ್ದು ಮತ್ತು ಪ್ರಾಧಿಕಾರಕ್ಕೆ ಎಲ್ಲಾ ಸಂದಾಯಗಳನ್ನು ಅದರ ಮೂಲಕ ಮಾಡತಕ್ಕದ್ದು.

(2) ಪ್ರಾಧಿಕಾರವು, ಈ ಅಧಿನಿಯಮದ ಅಡಿಯಲ್ಲಿ ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ತನ್ನ ಕರ್ತವ್ಯಗಳನ್ನು ನೆರವೇರಿಸಲು ಮತ್ತು ತನ್ನ ಪ್ರಕಾರ್ಯಗಳನ್ನು ನಿರ್ವಹಿಸಲು ಅಂಥ ಮೊತ್ತವನ್ನು ಖರ್ಚು ಮಾಡಬಹುದು. ಅಂಥ ಮೊತ್ತವನ್ನು ಪ್ರಾಧಿಕಾರದ ನಿಧಿಯಿಂದ ಸಂದಾಯ ಮಾಡಬಹುದಾದ ವೆಚ್ಚವೆಂದು ಪರಿಗಣಿಸತಕ್ಕದ್ದು.

**37. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ಪ್ರಾಧಿಕಾರವು ಕ್ರಮಬದ್ಧವಾದ ಲೆಕ್ಕಪತ್ರಗಳು ಮತ್ತು ಇತರ ದಾಖಲೆಗಳನ್ನು ನಿರ್ವಹಿಸತಕ್ಕದ್ದು ಹಾಗೂ ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಮತ್ತು ಅಂಥ ವಿಧಾನದಲ್ಲಿ ಲೆಕ್ಕಪತ್ರಗಳ ವಾರ್ಷಿಕ ವಿವರ ಪಟ್ಟಿಕೆಯನ್ನು ತಯಾರಿಸತಕ್ಕದ್ದು.

(2) ಪ್ರಾಧಿಕಾರವು ನೇಮಿಸಿದ ಅಂಥ ಲೆಕ್ಕಪರಿಶೋಧಕರು ಪ್ರಾಧಿಕಾರದ ಲೆಕ್ಕಪತ್ರಗಳ ಲೆಕ್ಕ ಪರಿಶೋಧನೆಯನ್ನು ಮಾಡತಕ್ಕದ್ದು.

(3) ಸದರಿ ಲೆಕ್ಕಪರಿಶೋಧಕರು ಪ್ರಾಧಿಕಾರದ ಪುಸ್ತಕಗಳು, ಲೆಕ್ಕಪತ್ರಗಳು, ಸಂಬಂಧಪಟ್ಟ ವೋಚರುಗಳು ಮತ್ತು ಇತರ ದಾಖಲೆಗಳು ಹಾಗೂ ಕಾಗದಪತ್ರಗಳನ್ನು ಹಾಜರುಪಡಿಸಲು ಒತ್ತಾಯಪಡಿಸುವ ಮತ್ತು ಪ್ರಾಧಿಕಾರದ ಯಾವುವೇ ಕಚೇರಿಗಳನ್ನು ತಪಾಸಣೆ ಮಾಡುವ ಹಕ್ಕನ್ನು ಹೊಂದಿರತಕ್ಕದ್ದು.

(4) ಪ್ರಾಧಿಕಾರವು, ಪ್ರತಿಯೊಂದು ಹಣಕಾಸು ವರ್ಷವು ಕೊನೆಗೊಂಡಂದಿನಿಂದ ಒಂಬತ್ತು ತಿಂಗಳುಗಳೊಳಗೆ ಒಂದು ಲೆಕ್ಕಪರಿಶೋಧಿತ ಪ್ರತಿಯೊಂದಿಗೆ ಲೆಕ್ಕಪರಿಶೋಧಕರ ವರದಿಯ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

(5) ಸರ್ಕಾರವು, (4)ನೇ ಉಪಪ್ರಕರಣದ ಅಡಿಯಲ್ಲಿ ಲೆಕ್ಕಪರಿಶೋಧನಾ ವರದಿಯನ್ನು ಸ್ವೀಕರಿಸಿದ ತರುವಾಯ, ಆದಷ್ಟು ಬೇಗನೇ, ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.

**38. ವಾರ್ಷಿಕ ವರದಿ.–** ಪ್ರಾಧಿಕಾರವು, ಪ್ರತಿ ಹಣಕಾಸು ವರ್ಷದಲ್ಲಿ, ಹಿಂದಿನ ಹಣಕಾಸು ವರ್ಷದ ಅವಧಿಯಲ್ಲಿಯ, ಈ ಅಧಿನಿಯಮದ ಅಡಿಯಲ್ಲಿ ತನ್ನ ಚಟುವಟಿಕೆಗಳ ಪೂರ್ಣ ಮಾಹಿತಿಯನ್ನು ಕೊಡುವ ವಾರ್ಷಿಕ ವರದಿಯನ್ನು, ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಸಿದ್ಧಪಡಿಸತಕ್ಕದ್ದು ಮತ್ತು ಹಿಂದಿನ ಹಣಕಾಸು ವರ್ಷದ ಕೊನೆಯ ದಿನಾಂಕದಿಂದ ನಾಲ್ಕು ತಿಂಗಳುಗಳೊಳಗೆ ಅದರ ಪ್ರತಿಗಳನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಸರ್ಕಾರವು, ಅಂಥ ವರದಿಯನ್ನು ಹಿಂದಿನ ಹಣಕಾಸು ವರ್ಷದ ಕೊನೆಯ ದಿನಾಂಕದಿಂದ ಒಂಭತ್ತು ತಿಂಗಳುಗಳ ಅವಧಿಯೊಳಗೆ ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.

**39. ಆಯವ್ಯಯ.–** ಪ್ರಾಧಿಕಾರವು, ಪ್ರತಿ ಹಣಕಾಸು ವರ್ಷದ ಅವಧಿಯಲ್ಲಿ, ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಮತ್ತು ಅಂಥ ಸಮಯದಲ್ಲಿ, ಮುಂಬರುವ ಹಣಕಾಸು ವರ್ಷದ ಸಂಬಂಧದಲ್ಲಿ ಅಂದಾಜು ಸ್ವೀಕೃತಿ ಮತ್ತು ವೆಚ್ಚವನ್ನು ತೋರಿಸುವ ಆಯವ್ಯಯವನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

**40. ಪ್ರಾಧಿಕಾರದ ಸಾಲಪಡೆಯುವ ಅಧಿಕಾರ.–** ಪ್ರಾಧಿಕಾರವು, ಸರ್ಕಾರದ ಅನುಮತಿಯೊಂದಿಗೆ ಅಥವಾ ಅದಕ್ಕೆ ಸರ್ಕಾರವು ನೀಡಿದ ಯಾವುದೇ ಸಾಮಾನ್ಯ ಅಥವಾ ವಿಶೇಷ ಅಧಿಕಾರದ ನಿಬಂಧನೆಗಳಿಗೆ ಅನುಸಾರವಾಗಿ, ಸಾಲಗಳು ಅಥವಾ ಬಾಂಡುಗಳು, ಡಿಬೆಂಚರುಗಳನ್ನು ನೀಡುವ ಅಥವಾ ಈ ಅಧಿನಿಯಮದ ಅಡಿಯಲ್ಲಿ ತನ್ನ ಯಾವುದೇ ಅಥವಾ ಎಲ್ಲಾ ಪ್ರಕಾರ್ಯಗಳನ್ನು ನಿರ್ವಹಿಸಲು ತಾನು ಸೂಕ್ತವೆಂದು ಭಾವಿಸಬಹುದಾದ ಅಂಥ ಇತರ ಲಿಖಿತ ಪತ್ರಗಳನ್ನು ನೀಡುವ ಮೂಲಕ ಯಾವುದೇ ಮೂಲದಿಂದ ಹಣವನ್ನು ಸಾಲ ಪಡೆಯಬಹುದು.

**41. ಕರಾರು ಮಾಡುವ ವಿಧಾನ.–** ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಕ್ರಮಕೈಗೊಳ್ಳಲು ಅಧಿಕಾರವನ್ನು ಹೊಂದಿರುವ ವಿಷಯಗಳ ಸಂಬಂಧದಲ್ಲಿ, ಆತನು ಪ್ರಾಧಿಕಾರದ ಪರವಾಗಿ ಕರಾರುಗಳು ಮತ್ತು ಒಪ್ಪಂದಗಳನ್ನು ಕಾರ್ಯಗತಗೊಳಿಸತಕ್ಕದ್ದು. ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದ ಅಂಥ ಮೊತ್ತದವರೆಗೆ ಪ್ರಾಧಿಕಾರದ ಪರವಾಗಿ ಅಂಥ ಕರಾರುಗಳು ಅಥವಾ ಒಪ್ಪಂದಗಳನ್ನು ಆತನು ಕಾರ್ಯಗತಗೊಳಿಸಬಹುದು. ಇತರ ಎಲ್ಲಾ ಪ್ರಕರಣಗಳಲ್ಲಿ ಪ್ರಾಧಿಕಾರದ ಮಂಜೂರಾತಿಯೊಂದಿಗೆ ಮಾತ್ರವೇ ಆತನು ಒಂದು ಕರಾರು ಅಥವಾ ಒಪ್ಪಂದವನ್ನು ಕಾರ್ಯಗತಗೊಳಿಸತಕ್ಕದ್ದು.

## ಅಧ್ಯಾಯ – VI

## ಸಂಕೀರ್ಣ

**42. ಸರ್ಕಾರದ, ಸ್ಥಳೀಯ ಪ್ರಾಧಿಕಾರಗಳು ಇತ್ಯಾದಿಗಳ ಅಧಿಕಾರಿಗಳು ನೆರವು ನೀಡುವುದು.–** ಸರ್ಕಾರದ, ಯಾವುದೇ ಸ್ಥಳೀಯ ಅಥವಾ ಇತರ ಪ್ರಾಧಿಕಾರದ ಎಲ್ಲಾ ಅಧಿಕಾರಿಗಳು ಪ್ರಾಧಿಕಾರಕ್ಕೆ, ಅದರ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕೆ ಅಗತ್ಯವಾಗಬಹುದಾದ ಅಂಥ ನೆರವು ಮತ್ತು ಸಹಾಯವನ್ನು ನೀಡತಕ್ಕದ್ದು ಮತ್ತು ಅಂಥ ಮಾಹಿತಿಯನ್ನು ಒದಗಿಸತಕ್ಕದ್ದು ಮತ್ತು ಅದರ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕೆ ಅವಶ್ಯವಾಗಬಹುದಾದ ಅಂಥ ದಾಖಲೆಗಳು, ಭೂಪಟಗಳು, ನಕ್ಷೆಗಳು ಮತ್ತು ಇತರ ದಸ್ತಾವೇಜುಗಳ ತಪಾಸಣೆ ಮತ್ತು ಪರೀಕ್ಷೆಗಾಗಿ ಪ್ರಾಧಿಕಾರಕ್ಕೆ ಅಥವಾ ಈ ಬಗ್ಗೆ ಪ್ರಾಧಿಕೃತನಾದ ಯಾವೊಬ್ಬ ಇತರ ಅಧಿಕಾರಿಗೆ ಲಭ್ಯವಾಗುವಂತೆ ಮಾಡತಕ್ಕದ್ದು.

**43. ಅಧಿಕಾರ ವ್ಯಾಪ್ತಿಯ ಪ್ರತಿಷೇಧ.–** 16ನೇ ಪ್ರಕರಣದ ಅಡಿಯಲ್ಲಿ ಯಾವುದೇ ಸಾಧನ, ಸಲಕರಣೆ, ಯಂತ್ರೋಪಕರಣ, ಉಪಕರಣ, ಸಾಧನ ಸಾಮಗ್ರಿ, ದೋಣಿ, ವಾಹನ ಅಥವಾ ಇತರ ಯಾವುದೇ ಸ್ವತ್ತನ್ನು ಸ್ವಾಧೀನಪಡಿಸಿಕೊಂಡಿದ್ದಲ್ಲಿ, 18ನೇ ಪ್ರಕರಣದ ಅಡಿಯಲ್ಲಿ ಪ್ರಾಧಿಕೃತ ಅಧಿಕಾರಿಯು ಅಥವಾ 20ನೇ ಪ್ರಕರಣದ ಅಡಿಯಲ್ಲಿ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯು ಅಥವಾ 21ನೇ ಪ್ರಕರಣದ ಅಡಿಯಲ್ಲಿ ಮೇಲ್ಮನವಿಯ ಕೇಳುವಿಕೆಯನ್ನು (ಹಿಯರಿಂಗ್) ಮಾಡುವ ಸೆಷನ್ಸ್ ನ್ಯಾಯಾಧೀಶರು, ದಂಡ ಪ್ರಕ್ರಿಯಾ ಸಂಹಿತೆ 1973ರ (1974ರ ಕೇಂದ್ರ ಅಧಿನಿಯಮ 2) ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇನ್ನಾವುದೇ ಇತರ ಕಾನೂನಿನ ಅನುಸಾರವಾಗಿ ಅಧಿಕಾರಗಳನ್ನು ಚಲಾಯಿಸುವ ಹಕ್ಕುಳ್ಳವರಾಗಿರತಕ್ಕದ್ದು ಮತ್ತು ಇತರ ಯಾವುದೇ ಅಧಿಕಾರಿ, ನ್ಯಾಯಾಲಯ, ನ್ಯಾಯಾಧಿಕರಣ ಅಥವಾ ಪ್ರಾಧಿಕಾರವು ಅಂಥ ಸ್ವತ್ತಿನ ಅಭಿರಕ್ಷೆ, ಸ್ವಾಧೀನತೆ, ಬಟವಾಡೆ, ವಿಲೆ ಅಥವಾ ಹಂಚಿಕೆಗೆ ಸಂಬಂಧಿಸಿದಂತೆ ಆದೇಶ ಮಾಡುವ ಅಧಿಕಾರ ವ್ಯಾಪ್ತಿಯನ್ನು ಹೊಂದಿರತಕ್ಕದ್ದು.

**44. ಅಧಿಕಾರಿಗಳು ಸಾರ್ವಜನಿಕ ನೌಕರರಾಗಿರುವುದು.–** ಪ್ರಾಧಿಕಾರದ ಅಧ್ಯಕ್ಷರು, ಸದಸ್ಯರು, ಅಧಿಕಾರಿಗಳು ಮತ್ತು ಇತರ ನೌಕರರನ್ನು ಮತ್ತು ಈ ಅಧಿನಿಯಮ ಅಥವಾ ಅದರ ಅಡಿಯಲ್ಲಿ ಮಾಡಲಾದ ನಿಯಮಗಳ ಮೂಲಕ ಪ್ರದತ್ತವಾದ ಯಾವುದೇ ಅಧಿಕಾರಗಳನ್ನು ಚಲಾಯಿಸುವ ಯಾವೊಬ್ಬ ಇತರ ಅಧಿಕಾರಿಯನ್ನು ಭಾರತ ದಂಡ ಸಂಹಿತೆಯ 21ನೇ ಪ್ರಕರಣದ ಅರ್ಥ ವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರನೆಂದು ಭಾವಿಸತಕ್ಕದ್ದು.

**45. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧಿನಿಯಮ ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳ ಅಥವಾ ವಿನಿಯಮಗಳ ಅಡಿಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಬೇಕಾದುದನ್ನು ಲೋಪ ಮಾಡಿದ ಕಾರ್ಯದ ಸಂಬಂಧದಲ್ಲಿ, ಪ್ರಾಧಿಕಾರದ, ಅಥವಾ ಪ್ರಾಧಿಕಾರದ ಅಧ್ಯಕ್ಷರ ಅಥವಾ ಸದಸ್ಯರ ಅಥವಾ ಪ್ರಾಧಿಕಾರದ ಯಾವೊಬ್ಬ ಅಧಿಕಾರಿ ಅಥವಾ ನೌಕರರ ಅಥವಾ ಈ ಅಧಿನಿಯಮದ ಅಡಿಯಲ್ಲಿ ಪ್ರಾಧಿಕಾರವು ನೇಮಕ ಮಾಡಿದ ಅಥವಾ ಪ್ರಾಧಿಕೃತಗೊಳಿಸಿದ ಯಾವೊಬ್ಬ ವ್ಯಕ್ತಿಯ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಯಾವುದೇ ಇತರ ಕಾನೂನು ವ್ಯವಹರಣೆಗಳನ್ನು ನಡೆಸಲು ಅವಕಾಶ ಇರತಕ್ಕದ್ದಲ್ಲ.

**46. ಕರ್ತವ್ಯದ ನೆಪದಲ್ಲಿ ಮಾಡಿದ ಕಾರ್ಯಗಳ ಸಂಬಂಧದಲ್ಲಿ ದಾವೆಗಳು ಅಥವಾ ಪ್ರಾಸಿಕ್ಯೂಷನ್.–** (1) ಈ ಅಧಿನಿಯಮದ ಅಡಿಯಲ್ಲಿ ಪ್ರಾಧಿಕಾರದ ಹೆಸರಿಸಲಾದ ಅಧಿಕಾರಿಯು, ಪ್ರಾಧಿಕೃತ ಅಧಿಕಾರಿಯು ಅಥವಾ ಯಾವೊಬ್ಬ ಇತರ ಅಧಿಕಾರಿಯು ಅಥವಾ ನೌಕರನು ಮಾಡಿದ್ದಾನೆಂದು ಆಪಾದಿಸಲಾದ ಅಪರಾಧದ ಅಥವಾ ಅಂಥ ಹೆಸರಿಸಲಾದ ಅಧಿಕಾರಿಯು, ಪ್ರಾಧಿಕೃತ ಅಧಿಕಾರಿಯು ಅಥವಾ ಅಂಥ ಇತರ ಅಧಿಕಾರಿಯು ಅಥವಾ ನೌಕರನು ಅಂಥ ಕರ್ತವ್ಯದ ನೆಪದಲ್ಲಿ ಅಥವಾ ಕರ್ತವ್ಯವನ್ನು ಅಥವಾ ಅಧಿಕಾರವನ್ನು ಮೀರಿ ಯಾವುದೇ ಕಾರ್ಯವನ್ನು ಮಾಡಿದ್ದಾನೆಂದು ಆಪಾದಿಸಲಾದ ತಪ್ಪಿನ ಯಾವುದೇ ಪ್ರಕರಣದಲ್ಲಿ ಅಪರಾಧವನ್ನು ಎಸಗಿದ್ದಲ್ಲಿ ಅಥವಾ ಮಾಡಿದ್ದಲ್ಲಿ, ಅದು ಮೇಲೆ ಹೇಳಿದ ಸ್ವರೂಪದ್ದಾಗಿದೆಯೆಂದು ನ್ಯಾಯಾಲಯಕ್ಕೆ ಕಂಡುಬಂದಲ್ಲಿ, ಸರ್ಕಾರದ ಪೂರ್ವ ಮಂಜೂರಾತಿಯ ಹೊರತಾಗಿ ಅವರ ವಿರುದ್ಧ ಪ್ರಾಸಿಕ್ಯೂಷನ್ ಅಥವಾ ದಾವೆಯನ್ನು ಪುರಸ್ಕರಿಸತಕ್ಕದ್ದಲ್ಲ.

(2) ಮೇಲೆ ಹೇಳಿದಂತೆ ಅಂಥ ತಪ್ಪಿನ ಕಾರಣದಿಂದಾಗಿ, ಉದ್ದೇಶಿಸಲಾದ ದಾವೆಯ ಸಂದರ್ಭದಲ್ಲಿ, ದಾವೆಯನ್ನು ಹೂಡಲು ಉದ್ದೇಶಿಸಿದ ವ್ಯಕ್ತಿಯು, ಫಿರ್ಯಾದಿನಲ್ಲಿ ಹೇಳಿದ ತಪ್ಪಿನ ಬಗ್ಗೆ ಸಾಕಷ್ಟು ವಿವರಣೆಯೊಂದಿಗೆ ಉದ್ದೇಶಿತ ದಾವೆಯ ದಿನಾಂಕದಿಂದ ಕನಿಷ್ಠ ಒಂದು ತಿಂಗಳ ನೋಟೀಸನ್ನು, ಆರೋಪಿತ ತಪ್ಪು ಮಾಡಿದವನಿಗೆ ನೀಡಲು ಬದ್ಧನಾಗಿರತಕ್ಕದ್ದು, ಅದಕ್ಕೆ ತಪ್ಪಿದಲ್ಲಿ ಅಂಥ ದಾವೆಯನ್ನು ವಜಾ ಮಾಡತಕ್ಕದ್ದು.

(3) ವಾದಪತ್ರದಲ್ಲಿ ಪ್ರತಿವಾದಿಗೆ, ಮೇಲೆ ಹೇಳಿದಂತೆ ನೋಟೀಸನ್ನು ಜಾರಿ ಮಾಡಲಾಗಿದೆಯೆಂಬುದನ್ನು ಮತ್ತು ಅಂಥ ಜಾರಿಯ ದಿನಾಂಕವನ್ನು ತಿಳಿಸತಕ್ಕದ್ದು ಹಾಗೂ ಪ್ರತಿವಾದಿಯು ಪರಿಹಾರವನ್ನು ನೀಡಿದ್ದರೆ, ಹಾಗೆ ನೀಡಿದ ಪರಿಹಾರ ಎಷ್ಟು ಎಂಬುದನ್ನು ಅದರಲ್ಲಿ ತಿಳಿಸತಕ್ಕದ್ದು. ಸದರಿ ನೋಟೀಸಿನ ಒಂದು ಪ್ರತಿಯನ್ನು, ಅದನ್ನು ಜಾರಿ ಮಾಡಿದ ಸಮಯ ಮತ್ತು ವಿಧಾನದ ಬಗ್ಗೆ ಘೋಷಣಾ ಪತ್ರವನ್ನು ಹಿಂಬರಹ ಮಾಡಿ ವಾದಿಯು ವಾದಪತ್ರಕ್ಕೆ ಲಗತ್ತಿಸತಕ್ಕದ್ದು.

**47. ಅಧಿಕಾರಗಳ ಪ್ರತ್ಯಾಯೋಜನೆ.–** ಪ್ರಾಧಿಕಾರವು, ಈ ಅಧಿನಿಯಮದ ಅಡಿಯಲ್ಲಿ ತನಗೆ ಪ್ರದತ್ತವಾದ ಅಧಿಕಾರಗಳ ಪೈಕಿ ಯಾವುವೇ ಅಧಿಕಾರಗಳನ್ನು, ಲಿಖಿತ ಆದೇಶದ ಮೂಲಕ, ಯಾವೊಬ್ಬ ಅಧಿಕಾರಿಗೆ ಅಥವಾ ತನ್ನ ಅಧೀನದಲ್ಲಿರುವ ಪ್ರಾಧಿಕಾರಕ್ಕೆ, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ನಿರ್ಬಂಧಗಳು ಮತ್ತು ಷರತ್ತುಗಳು, ಯಾವುದಾದರೂ ಇದ್ದಲ್ಲಿ, ಅವುಗಳಿಗೆ ಒಳಪಟ್ಟು, ಅಂಥ ಅಧಿಕಾರಿ ಅಥವಾ ಪ್ರಾಧಿಕಾರವು ಚಲಾಯಿಸಲು ಪ್ರತ್ಯಾಯೋಜಿಸಬಹುದು.

**48. ಇತರ ಕಾನೂನುಗಳ ಪರಿಣಾಮ.–** (1) (2)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಈ ಅಧಿನಿಯಮ ಮತ್ತು ಅದರಡಿಯಲ್ಲಿ ರಚಿಸಲಾದ ನಿಯಮಗಳು ಮತ್ತು ವಿನಿಯಮಗಳು, ಈ ಅಧಿನಿಯಮವನ್ನು ಹೊರತುಪಡಿಸಿ, ಯಾವುದೇ ಅಧಿನಿಯಮದಲ್ಲಿ ಒಳಗೊಂಡಿರುವುದಕ್ಕೆ ಅಸಂಗತವಾಗಿರುವುದು ಏನೇ ಇದ್ದರೂ, ಪರಿಣಾಮಕಾರಿಯಾಗಿರತಕ್ಕದ್ದು.

(2) ಈ ಅಧಿನಿಯಮದಲ್ಲಿ ಇರುವುದಾವುದೂ, ಈ ಅಧಿನಿಯಮದ ಅಡಿಯಲ್ಲಿ ಅಪರಾಧವಾಗುವ, ಯಾವುದೇ ಕಾರ್ಯ ಅಥವಾ ಲೋಪಕ್ಕಾಗಿ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಅಡಿಯಲ್ಲಿ ಪ್ರಾಸಿಕ್ಯೂಟ್ ಮಾಡುವುದರಿಂದ ಮತ್ತು ದಂಡವನ್ನು ವಿಧಿಸುವುದರಿಂದ ಅಥವಾ ಈ ಅಧಿನಿಯಮ ಅಥವಾ ಅದರ ಅಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ಉಪಬಂಧ ಕಲ್ಪಿಸಿದುದನ್ನು ಹೊರತುಪಡಿಸಿ, ಯಾವುದೇ ಹೆಚ್ಚಿನ ಶಿಕ್ಷೆಗೆ ಅಥವಾ ದಂಡಕ್ಕೆ ಅಂಥ ಇತರ ಕಾನೂನಿನ ಅಡಿಯಲ್ಲಿ ಹೊಣೆಗಾರನಾಗುವುದರಿಂದ, ಯಾವೊಬ್ಬ ವ್ಯಕ್ತಿಯನ್ನು ಪ್ರತಿಬಂಧಿಸತಕ್ಕದ್ದಲ್ಲ:

ಪರಂತು, ಯಾವೊಬ್ಬ ವ್ಯಕ್ತಿಯು ಒಂದೇ ಅಪರಾಧಕ್ಕಾಗಿ ಎರಡು ಬಾರಿ ದಂಡಿತನಾಗತಕ್ಕದ್ದಲ್ಲ.

**49. ತೊಂದರೆಯ ನಿವಾರಣೆ.–** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೆ ತರುವಲ್ಲಿ ಯಾವುದೇ ತೊಂದರೆಯು ಉದ್ಭವಿಸಿದಲ್ಲಿ, ಸರ್ಕಾರವು, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಂತೆ, ಆದೇಶದ ಮೂಲಕ ಸರ್ಕಾರಿ ರಾಜ್ಯ ಪತ್ರದಲ್ಲಿ ಅಧಿಸೂಚನೆಯನ್ನು ಅಧಿಕೃತವಾಗಿ ಪ್ರಕಟಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗಾಗಿ ತೊಂದರೆಗಳನ್ನು ನಿವಾರಿಸಬಹುದು.

**50. ಪ್ರಾಧಿಕಾರದ ವಿರುದ್ಧ ದಾವೆಯ ನೋಟೀಸು ಇತ್ಯಾದಿ.–** (1) ಈ ಅಧಿನಿಯಮ ಅಥವಾ ಅದರಡಿಯಲ್ಲಿ ರಚಿಸಿದ ನಿಯಮಗಳ ಅಥವಾ ವಿನಿಯಮಗಳ ಅನುಸಾರವಾಗಿ ಮಾಡಿದ ಅಥವಾ ಮಾಡಲಾಗಿದೆಯೆಂದು ಭಾವಿಸಲಾಗುವ ಯಾವುದೇ ಕಾರ್ಯಕ್ಕಾಗಿ ಉದ್ದೇಶಿಸಿದ ದಾವೆ ಅಥವಾ ಇತರ ವ್ಯವಹರಣೆಗಳ ಆದರೆ, ಅದರ ಕಾರಣವನ್ನು ತಿಳಿಸುವ ಒಂದು ತಿಂಗಳ ಲಿಖಿತ ನೋಟೀಸನ್ನು ನೀಡದ ಹೊರತು, ಮತ್ತು ಅಂಥ ದಾವೆ ಅಥವಾ ಇತರ ವ್ಯವಹರಣೆಗಳ ಕಾರಣ ಉಂಟಾದಂದಿನಿಂದ ಆರು ತಿಂಗಳುಗಳ ತರುವಾಯ ಅಥವಾ ಸಾಕಷ್ಟು ಪರಿಹಾರವನ್ನು ನೀಡಿದ ತರುವಾಯ ಪ್ರಾಧಿಕಾರದ, ಪ್ರಾಧಿಕಾರದ ಅಧ್ಯಕ್ಷನ ಅಥವಾ ಯಾವೊಬ್ಬ ಸದಸ್ಯನ ವಿರುದ್ಧ ಯಾವುದೇ ದಾವೆ ಅಥವಾ ಇತರ ವ್ಯವಹರಣೆಗಳನ್ನು ಪ್ರಾರಂಭಿಸತಕ್ಕದ್ದಲ್ಲ.

(2) ಪ್ರಾಧಿಕಾರವು, ಅದರ ಅಧ್ಯಕ್ಷನು ಅಥವಾ ಸಂದರ್ಭಾನುಸಾರವಾಗಿ ಯಾವೊಬ್ಬ ಸದಸ್ಯನು ತನ್ನ ಪದದ ಸಾಮರ್ಥ್ಯದಲ್ಲಿ ಮಾಡಿದ ಅಥವಾ ಮಾಡಲಾಗಿದೆಯೆಂದು ತಾತ್ಪರ್ಯವಾಗುವ ಯಾವುದೇ ಕಾರ್ಯದ ಸಂಬಂಧದಲ್ಲಿ ಪ್ರಾಧಿಕಾರದ, ಪ್ರಾಧಿಕಾರದ ಅಧ್ಯಕ್ಷನ ಅಥವಾ ಅಂಥ ಸದಸ್ಯನ ವಿರುದ್ಧ, ತುರ್ತು ಅಥವಾ ತಕ್ಷಣದ ಪರಿಹಾರವನ್ನು ಪಡೆಯಲು ಒಂದು ದಾವೆಯನ್ನು (1)ನೇ ಉಪಪ್ರಕರಣದಲ್ಲಿ ಅಗತ್ಯಪಡಿಸಿದ ಯಾವುದೇ ನೋಟೀಸನ್ನು ಜಾರಿ ಮಾಡದೆ, ನ್ಯಾಯಾಲಯದ ಅನುಮತಿಯೊಂದಿಗೆ ಹೂಡಬಹುದು ಆದರೆ ನ್ಯಾಯಾಲಯವು, ದಾವೆಯಲ್ಲಿ ಕೋರಲಾದ ಪರಿಹಾರದ ಸಂಬಂಧದಲ್ಲಿ, ಕಾರಣವನ್ನು ತೋರಿಸುವ ಯುಕ್ತ ಅವಕಾಶವನ್ನು ಪ್ರಾಧಿಕಾರಕ್ಕೆ, ಅಧ್ಯಕ್ಷನಿಗೆ ಅಥವಾ ಸಂದರ್ಭಾನುಸಾರವಾಗಿ ಸದಸ್ಯನಿಗೆ ನೀಡಿದ ಹೊರತು ಮಧ್ಯಂತರ ಅಥವಾ ಅನ್ಯಥಾ ದಾವೆಯಲ್ಲಿ ಪರಿಹಾರವನ್ನು ಮಂಜೂರು ಮಾಡತಕ್ಕದ್ದಲ್ಲ.

51. **ನಿಯಮಗಳ ರಚನಾಧಿಕಾರ.-** (1) ಸರ್ಕಾರವು, ಈ ಅಧಿನಿಯಮದ ಯಾವುದೇ ಅಥವಾ ಎಲ್ಲಾ ಉದ್ದೇಶಗಳನ್ನು ನೆರವೇರಿಸಲು, ಪೂರ್ವ ಪ್ರಕಟಣೆಯ ತರುವಾಯ, ಅಧಿಸೂಚನೆಯ ಮೂಲಕ, ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿದ್ದಾಗ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ಅದರ ನಿಕಟ ತರುವಾಯದ ಅಧಿವೇಶನ ಮುಕ್ತಾಯವಾಗುವ ಮೊದಲು ಉಭಯ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಬೇಕೆಂದು ಒಪ್ಪಿದರೆ ಅಥವಾ ಯಾವುದೇ ನಿಯಮ ರಚಿಸಬಾರದೆಂದು ಒಪ್ಪಿದರೆ ಆ ತರುವಾಯ ಸಂದರ್ಭಾನುಸಾರ, ನಿಯಮವು ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಯಾವುದೇ ಪರಿಣಾಮ ಹೊಂದಿರತಕ್ಕದ್ದಲ್ಲ. ಆದಾಗ್ಯೂ ಅಂಥ ಯಾವುದೇ ಮಾರ್ಪಾಟು ಅಥವಾ ರದ್ಧತಿಯು ಆ ನಿಯಮದ ಅಡಿಯಲ್ಲಿ ಮೊದಲು ಮಾಡಿದ ಯಾವುದೇ ಕೃತ್ಯದ ಮಾನ್ಯತೆಗೆ ಬಾಧಕವಾಗತಕ್ಕದ್ದಲ್ಲ.

52. **ವಿನಿಯಮಗಳನ್ನು ರಚಿಸಲು ಅಧಿಕಾರ.-** ಪ್ರಾಧಿಕಾರವು, ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳಿಗೆ ಒಳಪಟ್ಟು ಮತ್ತು ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ, ಅದರ ಪ್ರಕಾರ್ಯಗಳು, ಅಧಿಕಾರಗಳು ಮತ್ತು ಕರ್ತವ್ಯಗಳಿಗೆ ಸಂಬಂಧಪಡುವಷ್ಟರಮಟ್ಟಿಗೆ, ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು, ಅಧಿಸೂಚನೆಯ ಮೂಲಕ ವಿನಿಯಮಗಳನ್ನು ರಚಿಸಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಗುಂಜಿಗಾವಿ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಶನಿವಾರ, ಮಾರ್ಚ್ ೦೭, ೨೦೧೫ (ಫಾಲ್ಗುಣ ೧೬, ಶಕ ವರ್ಷ ೧೯೩೬) | ನಂ. ೨೦೬ |
| **Part – IV-A** | **Bengaluru, Saturday, March 07, 2015 (Phalguna 16, Shaka Varsha 1936)** | **No. 206** |

## PARLIAMENTARY AFFAIRS SECRETARIAT

## NOTIFICATION

### No. SAMVYASHAE 07 SHASANA 2012, Bangalore, dated: 07.03.2015.

Ordered that the translation of ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2014 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ:10) in the English language, be published as authorised by the Governor of Karnataka under clause (3) of Article 348 of the constitution of India in the Karnataka Gazette for general information.

The following translation of ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2014 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ:10) in the English language is published in the Official Gazette under the authority of the Governor of Karnataka under clause (3) of Article 348 of the Constitution of India.

**KARNATAKA ACT NO. 10 OF 2015**

**(First Published in the Karnataka Gazette Extra-ordinary on the Seventh day of March 2015)**

**THE KARNATAKA LAKE CONSERVATION AND DEVELOPMENT AUTHORITY ACT, 2014**

(Received the assent of the Governor on the Third day of March 2015)

An Act to provide for establishment of a Lake Conservation and Development Authority and other matters connected therewith or incidental thereto;

Whereas, the Apex Court has already ruled that right to water is a part of right to life guaranteed by Article 21 of the Constitution of India;

Whereas, due to rapid urbanization, industrialization and population explosion, water bodies like tanks and lakes are being converted into urban and industrial land use after breaking bund and draining water;

Whereas, such destruction of water bodies leads to acute shortage of water and rapid depletion of ground water and thereby affecting availability of water for irrigation, drinking and consumption by live stock, besides affecting aquatic flora and fauna and accordingly there is an urgent need for protection, conservation and rejuvenation of water bodies;

And now therefore, it is expedient to provide for establishment of a Karnataka Lake Conservation and Development Authority having necessary powers and functions to achieve the object of protection, conservation and rejuvenation of water bodies like tanks, lakes, wet lands and their catchment areas, inlets and outlets for ensuring long term sustenance of such water bodies, and for other matters connected therewith or incidental thereto.

Be it enacted by the Karnataka State Legislature in the sixty fifth year of the Republic of India as follows:-

## CHAPTER I

## PRELIMINARY

**1. Short title, commencement and application.-** (1) This Act may be called the Karnataka Lake Conservation and Development Authority Act, 2014.

(2) It shall come into force on such date as the Government may, by notification appoint.

(3) It applies to all the lakes in the Karnataka State located within the limits of all Municipal Corporations and Bangalore Development Authority or any other water bodies or lakes notified by the Government from time to time.

**2. Definitions**.- (1) In this Act, unless the context otherwise requires,-

(a) "Authority" means the Karnataka Lake Conservation and Development Authority constituted under section 3;

(b) "Authorized officer" means any officer appointed by the Government under section 11;

(c) "Chief Executive Officer" means the Chief Executive Officer of the Authority appointed under section 9;

(d) "Designated Officer" means any officer who belongs to Forest Department or Urban Development Department and appointed or designated as such by the Authority under section 12;

(e) "Empowered Officer" means any officer appointed under section 13;

(f) "Government" means the Government of Karnataka;

(g) "Industry" includes any operation or process or treatment and disposal system, which consumes water or any other liquid or gives rise to sewage effluents or trade effluents, but does not include any hydro power unit;

(h) "lake" means an inland water-body irrespective of whether it contains water or not, mentioned in revenue records as sarkari kere, kharab kere, kunte, katte or by any other name and includes the peripheral catchment areas, Rajakaluve main feeder, inlets, bunds, weirs, sluices, draft channels, outlets and the main channels of drainages to and fro;

(i) "Landscape" includes all forms of trees, shrubs, grasses whether naturally growing or planted in water bodies to enhance aesthetic value;

(j) "Notification" means a notification published in the Official Gazette;

(k) "Member" means a member of the Lake Conservation Development Authority, specified in sub-section (3) and sub-section (5) of section 3 includes the Chairman;

(l) "Research" means study or systematic investigation on all the relevant issues pertaining to lakes;

(m) "surface water" includes water occurring on the land of lakes as defined above.

(2) Words and expressions used in this Act, but not defined herein, shall have the meanings assigned to them in the Karnataka Land Revenue Act, 1964 (Karnataka Act 12 of 1964).

## CHAPTER II

## THE LAKE CONSERVATION AND DEVELOPMENT AUTHORITY

**3. Constitution of the Authority.-** (1) As soon as may be after the date of commencement of this Act, the Government shall constitute an Authority to be called the Karnataka Lake Conservation and Development Authority.

(2) The Authority shall be a body corporate by the name aforesaid having perpetual succession and a common seal, with power, subject to the provisions of this Act to hold property and shall by the said name sue or be sued.

(3) The Governing Council of the Authority shall consist of the following members, namely:-

| | |
|---|---|
| (a) The Chief Secretary to Government shall be the Chairperson of the Governing Council; | |
| (b) The Additional Chief Secretary or Principal Secretary to Government, Forest, Ecology and Environment Department | - Ex-officio Member |
| (c) Additional Chief Secretary or Principal Secretary to Government, Finance Department | - Ex-officio Member |
| (d) Additional Chief Secretary or Principal Secretary to Government, Urban Development Department | - Ex-officio Member |

| | |
|---|---|
| (e) The Principal Secretary or Secretary to Government, Minor Irrigation Department | - Ex-officio Member |
| (f) The Principal Secretary or Secretary to Government, Animal Husbandry and Fisheries Department | - Ex-officio Member |
| (g) The Principal Secretary to Government, Revenue Department | - Ex-officio Member |
| (h) The Member Secretary, Karnataka State Pollution Control Board, Bangalore | - Ex-officio Member |
| (i) The Chairman, Bangalore Water Supply and Sewerage Board, Bangalore | - Ex-officio Member |
| (j) The Commissioner, Bangalore Development Authority, Bangalore | - Ex-officio Member |
| (k) The Commissioner, Bruhat Bangalore Mahanagara Palike, Bangalore | - Ex-officio Member |
| (l) The Secretary to Government Forest, Ecology and Environment Department (Ecology and Environment) | - Ex-officio Member |
| (m) Three non-official members nominated by the Government from amongst experts in the field of environment and ecology or lake conservation of whom at least one shall be a woman and one shall be a person belonging to the Scheduled Castes or Scheduled Tribes. | - Non Official Member |
| (n) The Chief Executive Officer of the Authority. | - Member secretary |

(4) There shall be an Executive Committee of the Authority which shall be chaired by the Additional Chief Secretary or Principal Secretary to Government, Forest Ecology and Environment Department. The Executive Committee shall function as an Empowered Committee of the Authority.

(5) The Executive Committee of the Authority shall consist of the following members, namely:-

| | | |
|---|---|---|
| 1. | Additional Chief Secretary or Principal Secretary to Government, Forest, Ecology and Environment Department Chairperson. | |
| 2. | Additional Chief Secretary or Principal Secretary to Government, Urban Development Department | - Member |
| 3. | Principal Secretary or Secretary to Government Animal Husbandry and Fisheries Department | - Member |
| 4. | Principal Secretary or Secretary to Government Minor Irrigation Department | - Member |
| 5. | Principal Secretary or Secretary to Government Revenue Department | - Member |
| 6. | Principal Secretary or Secretary to Government Finance Department | - Member |
| 7. | Secretary to Government(Ecology and Environment), Forest, Ecology and Environment Department | - Member |
| 8. | Member Secretary, Karnataka State Pollution Control Board, Bangalore | - Member |
| 9. | Principal Chief Conservator of Forests, (HOFF) Forest Department | - Member |
| 10. | Chairman, Bangalore Water Supply and Sewerage Board, Bangalore | - Member |
| 11. | Commissioner, Bruhat Bangalore Mahanagar Palike | - Member |
| 12. | Chief Executive Officer of the Authority. | - Member Secretary |

(6) The Government may remove from the Authority any non-official member who, in its opinion, has,-

(1) been adjudged as an insolvent; or

(2) been convicted of an offence which involves moral turpitude; or

(3) become physical or mentally incapable of acting as a member; or

(4) so abused his position as to render his continuance in office detrimental to the public interest; or

(5) acquired such financial or other interest as is likely to affect prejudicially his functions as a member.

**4. Meetings of the Authority.-**

(1) (a) The Governing Council of the Authority shall meet at least once in a financial year.

(b) The Executive Committee of the Authority shall meet at least once in three months;

(2) The Chairperson shall preside over the meeting of the Authority or if for any reason he is unable to attend any meeting, any other member chosen by the members present at the meeting shall preside.

(3) Quorum for a meeting of the Authority shall be one third of the total number of members.

(4) Save as otherwise expressly provided by or under this Act, the procedure for conduct of business at the meeting of the Authority shall be such as may be specified in the regulations.

**5. Functions of the Authority.-** Subject to the provisions of this Act and the rules made thereunder, the functions of the Authority shall be,-

(1) to exercise regulatory control over all the lakes within its jurisdictions including prevention and removal of encroachment of lake;

(2) to protect, conserve, reclaim, regenerate and restore lakes to facilitate recharge of depleting ground water by promoting integrated approach with the assistance of concerned Government departments, local and other authorities;

(3) to take up environmental impact assessment studies for any or all lakes;

(4) to take up environmental planning and mapping of lakes and their surrounding areas with the help of geographical information system and prepare database and atlas of lakes and their catchments;

(5) to prepare a plan for integrated development of lakes;

(6) to improve and also create habitat (wet lands) for aquatic biodiversity, water birds and aquatic plants by reducing sullage and non-point sewage impacts;

(7) to facilitate for impounding storm water drainage system, reduce or remove siltation of lakes by taking up appropriate soil and water conservation measures including afforestation and to augment recharge of ground water aquifers and revive bore-wells;

(8) to improve and monitor water quality, conserve lake ecology on need basis and to protect them against domestic and industrial pollution;

(9) to utilize or allow to utilize the lakes for the purpose of drinking water, fishing, irrigation, education or tourism or any other purpose as the Authority may determine;

(10) to encourage participation of communities and voluntary agencies and to launch public awareness programmes for lake conservation, preservation and protection of lakes;

(11) to advise on any matter that may be referred to it by the Government or any institution.

(12) to promote integrated and co-ordinated applied research on all the relevant issues pertaining to lakes;

(13) to do such other acts as the Authority may consider necessary, conducive or incidental, directly or indirectly, to achieve the object of this Act.

**6. Powers of the Authority.-** Subject to the provisions of this Act and the rules made thereunder, powers of the Authority shall be,-

(1) to cause entry upon or authorize any officer to enter upon any land, to survey, demarcate and make a map of lakes;

(2) to receive grants, donations, contributions, deposits and rents, and to levy fees or charges for development and maintenance of lakes at such rates approved by the Government;

(3) to grant technical approval to any project proposal made by any Government Department or organization or association or person

interested in developing, maintaining, conserving or protecting a lake and also to take up such activities on its own which shall be approved by the Government;

(4) to invite experts as and when required to its meetings;

(5) to constitute sub-committees as may deemed necessary for the purpose of research, implementation, studies, approval of projects, conservation, preservation, protection and any other purpose relating to lake; and

(6) to take up survey of lake boundary, detect encroachment if any and to remove encroachments and erect boundary pillars and to fence them to prevent encroachment of the lake.

**7. Powers of Chairperson of Governing Council.-** The Chair person of the Governing Council shall be the Non-Executive Head of the Authority and shall,-

(a) convene, preside over and conduct meetings of the Governing Council;

(b) discharge all duties conferred and exercise all powers conferred on him by or under this Act.

**8. Powers of Chairperson of Executive Committee.-** The Chair person of the Executive Committee shall be the non executive head of the Authority and shall,-

(a) convene, preside over and conduct meetings of the Executive Committee;

(b) discharge all duties conferred and exercise all powers conferred on him by or under this Act;

(c) seek funds for the regeneration/development/ maintenance of lakes;

(d) Grant approval for the Detailed Project Reports (DPRs) to be submitted to Ministry of Environment and Forests under National Plan for Conservation of Aquatic Ecosystem, grant approvals for the works to be taken up by following due process under Karnataka Transparency in Public Procurements Act, 2000;

(e) have powers to constitute any sub-committee/s for the above purposes.

**9. Chief Executive Officer.-** (1) The Government may appoint an officer not below the rank of a Secretary to the Government or equivalent officer to be the Chief Executive Officer of the Authority.

(2) Subject to the general powers of the Authority and the Chair person, overall powers for the purpose of carrying out the provisions of this Act and any other law for the time being in force which imposes a duty or confers any powers on the Authority shall vest in the Chief Executive Officer and who shall also,-

(a) perform all the duties and exercise all the powers imposed or conferred upon him by or under this Act or under any other law for the time being in force;

(b) carry into effect the resolutions of the Authority;

(c) conduct all affairs of the Authority;

(d) supervise and control execution of all schemes and works of the Authority or entrusted by the Government or any other Authority;

(e) draw and disburse monies out of the fund of the Authority;

(f) exercise control over the officers and officials of the Authority;

(g) authenticate by his signature all permissions, orders, decisions, notices and other documents of the Authority;

(h) exercise such other powers and discharge such other functions and perform such other duties as may be prescribed.

**10. Officers and other employees of the Authority.-** (1) The Government shall provide to the Authority with such officers and \employees as may be necessary for the efficient discharge of the functions of the Authority.

(2) The method of recruitment, the salaries and allowances payable to and other terms and conditions of service of the officers and other employees appointed for the purpose of the Authority shall be such as may be prescribed.

**11 Authorized Officer.-** The Government may appoint an officer not below the rank of a Group 'A' officer of the State Civil Services as Authorized officer who shall exercise powers under this Act and such other powers as may be specified by the Government from time to time.

**12. Designated officer.-** (1) The Authority may designate or appoint any officer as designated officer to be in-charge of one or more lakes to ensure their protection, conservation, development and for any other purpose.

(2) The designated officers shall exercise powers under this Act and such other powers as the Authority may by a special or general order confer upon them.

**13. Empowered Officer.-** The Authority may designate or appoint any officer as the Empowered Officer to carry out any of the works assigned to the Designated Officer.

## CHAPTER III

## PROTECTION OF LAKES

**14. Acts prohibited in lakes.-** Notwithstanding anything to the contrary contained in any law for the time being in force, no person or institution or organization (registered or unregistered) or company or firm or association, Government departments, Corporation or any local or other authority and their agents or employees or any body on their behalf shall,-

He/She is physically disabled visual disabled speech & hearing disabled and has . . . . & . . . . percent) permanent (Physical impairment visual impairment speech & hearing impairment) in relation to his/her . . .. . . . . . . .. . . .

**Note:**

1. This condition is progressive/non progressive likely to improve / not likely to improve.
2. Re-assessment is not recommended / is recommended after a period of . . . . ...... months/years.

*Strike out which is not applicable.

**Recent Photograph showing the disability affixed here.**

**DOCTOR (Seal)** **DOCTOR (Seal)** **DOCTOR (Seal)**

**Countersigned by the**
**Medical Superintendent CMO/Head of Hospital**
**(with seal)**

**GOVERNMENT OF KARNATAKA**

No.DPAR 21 SRR 2008

Karnataka Government Secretariat,
Vidhana Soudha,
Bangalore, Dated:03/08/2009.

**NOTIFICATION**

Whereas Rule 9(1A) of the Karnataka Civil Services (General Recruitment) Rules, 1977 provides for three percent reservation (horizontal reservation) in recruitment for Group 'A' and 'B' posts for persons with disabilities;

Whereas Per Section 32 of the Persons With Disabilities (Equal Opportunities, Protection of Rights and Full Participation) Act, 1995 the State Government has to identify category of posts which can be reserved for persons with disabilities in Government Departments.

Whereas in exercise of the powers conferred by sub-section (1) of section 32 of the Persons With Disabilities (Equal Opportunities, Protection of Rights and Full Participation) Act, 1995 (Central Act of 1996) and Rule 9(1A) of the Karnataka Civil Services (General Recruitment) Rules, 1977 the Government of Karnataka identified the posts for Physically Handicapped person in Notification No.DPAR 104 SRR 2005, Dated:13-09-2005.

Whereas as per Section 32(b) of the Persons With Disabilities (Equal Opportunities, Protection of Rights and Full Participation) Act, 1995 (Central Act of 1996) the State Government shall at periodical intervals not exceeding 3 years, review the list of posts identified and update the list taking into consideration, the developments in technology.

Now, therefore, in exercise of the powers conferred by sub-section (a) and (b) of section 32 of the Persons With Disabilities (Equal Opportunities, Protection of Rights and Full Participation) Act, 1995 (Central Act of 1996) and Rule 9(1A) of the Karnataka Civil Services (General Recruitment) Rules, 1977 the Government of Karnataka hereby identifies the posts specified in Col. 3, 4 and 5 of the Schedule below in respect of the category of the disabled persons specified in the headings of the respective columns in the Departments specified in col. (2) thereof.

**EXTRACT OF SCHEDULE**

| Sl No. | Name of the Department | Blindness or Low vision | Hearing Impairment | Locomotor Disability or Cerebral Palsy |
|---|---|---|---|---|
| 1. | Agricultural Marketing | District Marketing Officer (Asst.Dir) Agrl.Mktg. (Group B) | District Marketing Officer (Asst.Dir) Agrl.Mktg., (Group B) | District Marketing Officer (Asst.Dir) Agrl.Mktg., (Group B) |
| 2. | Food & Civil Supplies | Asst.Dir. Food & Civil Supplies (Group B) | Asst.Dir. Food & Civil Supplies (Group B) | Asst.Dir. Food & Civil Supplies (Group B) |
| 3. | Department of Youth Empowerment and Sports | Dy.Dir., Sports & Youth Services (Group - B) | 1. Dy.Dir., Sports & Youth Services (Group - B)<br>2. Asst. Dir., Sports & Youth Services (Group-B) | Dy.Dir., Sports & Youth Services (Group -B) |

| Sl No. | Name of the Department | Blindness or Low vision | Hearing Impairment | Locomotor Disability or Cerebral Palsy |
|---|---|---|---|---|
| 4. | Karnataka Govt. Secretariat | - | Section Officer (Group B) | Section Officer (Group B) |
| 5. | Revenue Department | Tahsildar-Grade-II (Group B) | Tahsildar-Grade-II (Group B) | - |
| 6. | DPAR (Services) | - | K.A.S. (Group-A) (Junior Scale) | K.A.S. (Group-A) (Junior Scale) |
| 7. | Commercial Tax Department | Commercial Tax Officer (Group-B) **(Low Vision only)** | Commercial Tax Officer (Group-B) | Commercial Tax Officer (Group-B) |
| 8. | Department of Treasuries | Asst. Treasury Officer (Group-B) **(Low Vision only)** | Asst. Treasury Officer (Group-B) | Asst. Treasury Officer (Group-B) |
| 9. | Social Welfare Department | Taluk Social Welfare Officer (Group-B) | Taluk Social Welfare Officer (Group-B) | Taluk Social Welfare Officer (Group-B) |
| 10. | Directorate of Municipal Administration | Chief Officer Gr-I (Group-B) | Chief Officer Gr-I (Group-B) | Chief Officer Gr-I (Group-B) |
| 11. | Rural Development and Panchayat Raj Department | - | Taluk Executive Officer (Group-A) / Assistant Secretary, Panchayat Raj | Taluk Executive Officer (Group-A) / Assistant Secretary, Panchayat Raj |

By order and in the name of the Governor of Karnataka,

sd/-

Under Secretary to Government,

Department of Personnel & Administrative Reforms (Service Rules-1)

## ಕರ್ನಾಟಕ ಲೋಕಸೇವಾ ಆಯೋಗ

## ಗೆಜೆಟೆಡ್ ಪ್ರೊಬೇಷನರ್ಸ್ (ಪೂರ್ವಭಾವಿ ಪರೀಕ್ಷೆ)–2014

## ಅಭ್ಯರ್ಥಿಗಳಿಗೆ ಪರೀಕ್ಷಾ ಸೂಚನೆಗಳು

**ಅಭ್ಯರ್ಥಿಗಳು ಈ ಕೆಳಗಿನ ಸೂಚನೆಗಳನ್ನು ಓದಿಕೊಂಡು ಅವುಗಳನ್ನು ಬಹು ಎಚ್ಚರಿಕೆಯಿಂದ ಚಾಚೂ ತಪ್ಪದೆ ಪಾಲಿಸತಕ್ಕದ್ದು.**

(1) ಪ್ರವೇಶ ಪತ್ರವಿಲ್ಲದ ಅಭ್ಯರ್ಥಿಗೆ ಪರೀಕ್ಷೆ ಬರೆಯಲು ಅನುಮತಿಸಲಾಗುವುದಿಲ್ಲ.

(2) ಪರೀಕ್ಷೆಯು ಪ್ರಾರಂಭವಾಗುವುದಕ್ಕೆ 20 ನಿಮಿಷಗಳ ಮುಂಚಿತವಾಗಿ ಅಭ್ಯರ್ಥಿಯು ಪರೀಕ್ಷಾ ಕೊಠಡಿಯೊಳಗೆ ಹಾಜರಿರತಕ್ಕದ್ದು ಮತ್ತು ಅವರವರ ನೋಂದಣಿ ಸಂಖ್ಯೆಯಲ್ಲೇ ಆಸೀನರಾಗಿರತಕ್ಕದ್ದು. ಪರೀಕ್ಷಾ ಸಮಯ ಮುಗಿಯುವವರೆಗೂ ಅಭ್ಯರ್ಥಿಯು ಪರೀಕ್ಷಾ ಕೊಠಡಿಯನ್ನು ಬಿಡತಕ್ಕದ್ದಲ್ಲ. ಪರೀಕ್ಷೆಯು ಆರಂಭವಾದ 10 ನಿಮಿಷಗಳ ನಂತರ ಬರುವ ಯಾವುದೇ ಅಭ್ಯರ್ಥಿಗೆ ಪರೀಕ್ಷಾ ಕೊಠಡಿಗೆ ಪ್ರವೇಶ ನೀಡಲಾಗುವುದಿಲ್ಲ.

(3) ಎರಡೂ ಪತ್ರಿಕೆಗಳ ಪ್ರಶ್ನೆಗಳು **" ವಸ್ತು ನಿಷ್ಠ ಬಹು ಆಯ್ಕೆ"** ಮಾದರಿಯಲ್ಲಿರುತ್ತದೆ.

| **ಘಂಟೆ ಬಾರಿಸುವ ಸಮಯ** | | |
|---|---|---|
| | **ಪೂರ್ವಾಹ್ನ** | **ಅಪರಾಹ್ನ** |
| | **ಪತ್ರಿಕೆ –1** | **ಪತ್ರಿಕೆ–2** |
| ಮೊದಲ ಘಂಟೆ | ಬೆಳಿಗ್ಗೆ 9.40 | ಮಧ್ಯಾಹ್ನ 1.40 |
| ಎರಡನೆ ಘಂಟೆ | ಬೆಳಿಗ್ಗೆ 10.00 | ಮಧ್ಯಾಹ್ನ 2.00 |
| ಮೂರನೇ ಘಂಟೆ | ಬೆಳಿಗ್ಗೆ 11.55 | ಮಧ್ಯಾಹ್ನ 3.55 |
| ನಾಲ್ಕನೇ ಘಂಟೆ | ಮಧ್ಯಾಹ್ನ 12.00 | ಮಧ್ಯಾಹ್ನ 4.00 |

(4) <u>ಪ್ರಶ್ನೆ ಪತ್ರಿಕೆ ಮತ್ತು ಓ.ಎಂ.ಆರ್ ಉತ್ತರ ಹಾಳೆ:–</u>

ಎ) ಪ್ರತಿ ಪ್ರಶ್ನೆಗೆ ಎರಡು ಅಂಕಗಳಂತೆ ಪ್ರತಿ ಪತ್ರಿಕೆಯು 200 ಅಂಕಗಳದ್ದಾಗಿರುತ್ತದೆ.

ಬಿ) ಪ್ರತಿ ಪತ್ರಿಕೆಯು ಗರಿಷ್ಠ 200 ಅಂಕಗಳದ್ದಾಗಿದ್ದು, ಎರಡು ಗಂಟೆಗಳ ಕಾಲಾವಧಿಯದ್ದಾಗಿರುತ್ತದೆ (ಎರಡು ಪತ್ರಿಕೆಗಳಿಗೆ ಒಟ್ಟು 400 ಅಂಕಗಳು).

ಸಿ) ಪ್ರಶ್ನೆ ಪುಸ್ತಿಕೆಗಳು ವಿವಿಧ ಶ್ರೇಣಿಗಳಲ್ಲಿದ್ದು, ಪ್ರತಿಯೊಂದು ಪ್ರಶ್ನೆಯು ನಾಲ್ಕು ಉತ್ತರಗಳನ್ನು ಹೊಂದಿರುತ್ತದೆ. ಅಭ್ಯರ್ಥಿಯು ಈ ನಾಲ್ಕು ಉತ್ತರಗಳಲ್ಲಿ ಸರಿಯಾದ ಒಂದು ಉತ್ತರವನ್ನು ಆಯ್ಕೆ ಮಾಡಿ ಓ.ಎಂ.ಆರ್ ಉತ್ತರ ಹಾಳೆಯಲ್ಲಿ ತಮಗೆ ಸರಿ ಎನಿಸುವ ವೃತ್ತವನ್ನು ಪೂರ್ಣವಾಗಿ ಶೇಡ್ ಮಾಡುವ ಮೂಲಕ ಉತ್ತರಿಸತಕ್ಕದ್ದು.

ಡಿ) <u>**ಋಣಾತ್ಮಕ ಮೌಲ್ಯಮಾಪನ**</u>–

**i.** **ಪ್ರತಿಯೊಂದು ಪ್ರಶ್ನೆಗೂ 04 ಪರ್ಯಾಯ ಉತ್ತರಗಳಿದ್ದು, ಅಭ್ಯರ್ಥಿಯು ಸದರಿ ಪ್ರಶ್ನೆಗೆ ನಮೂದಿಸುವ ಪ್ರತಿಯೊಂದು ತಪ್ಪು ಉತ್ತರಕ್ಕೆ ಸಂಬಂಧಿಸಿದಂತೆ ನಾಲ್ಕನೇ ಒಂದಂಶದಷ್ಟು (¼) ಅಂಕಗಳನ್ನು ಕಳೆಯಲಾಗುವುದು.**

**ii.** **ಅದೇ ರೀತಿ ಅಭ್ಯರ್ಥಿಯು ಒಂದೇ ಪ್ರಶ್ನೆಗೆ ಒಂದಕ್ಕಿಂತ ಹೆಚ್ಚಿನ ಉತ್ತರಗಳನ್ನು ನಮೂದಿಸಿದ್ದಲ್ಲಿ ಹಾಗೂ ಅದರಲ್ಲಿ ನಮೂದಿಸಿರುವ ಒಂದು ಉತ್ತರವು ಸರಿಯಾಗಿದ್ದರೂ ಸಹ ಅದನ್ನು ತಪ್ಪು ಉತ್ತರವೆಂದು ಪರಿಗಣಿಸಿ ಮೇಲ್ಕಂಡಂತೆ ಅಂಕಗಳನ್ನು ಕಳೆಯಲಾಗುವುದು.**

**iii.** **ಪ್ರತಿಯೊಂದು ಪ್ರಶ್ನೆಗೂ 04 ಪರ್ಯಾಯ ಉತ್ತರಗಳಿದ್ದು, ಅಭ್ಯರ್ಥಿಯು ಯಾವುದೇ ಪ್ರಶ್ನೆಗೆ ಉತ್ತರವನ್ನು ನಮೂದಿಸದೇ ಖಾಲಿ ಬಿಟ್ಟಿದ್ದಲ್ಲಿ ಅಂತಹ ಪ್ರಶ್ನೆಗೆ ಋಣಾತ್ಮಕ ಅಂಕಗಳನ್ನು ಕಳೆಯಲಾಗುವುದಿಲ್ಲ.**

(5) ಪರೀಕ್ಷೆಯ ಎರಡು ಪ್ರಶ್ನೆಪತ್ರಿಕೆಗಳಿಗೂ ದ್ವಿಪ್ರತಿಯಲ್ಲಿರುವ ಕಾರ್ಬನ್ ರಹಿತ ಓ.ಎಂ.ಆರ್. ಉತ್ತರ ಹಾಳೆಯನ್ನು ನೀಡಲಾಗುತ್ತದೆ. ಕೊಠಡಿಯ ಸಂವೀಕ್ಷಕರು ಬೆಳಗಿನ ಅಧಿವೇಶನಕ್ಕೆ 9.45 ಕ್ಕೆ ಮತ್ತು ಮಧ್ಯಾಹ್ನದ ಅಧಿವೇಶನಕ್ಕೆ 1.45ಕ್ಕೆ ಓ.ಎಂ.ಆರ್ ಉತ್ತರ ಹಾಳೆಯನ್ನು ನೀಡುವರು. ಓ.ಎಂ.ಆರ್ ಉತ್ತರ ಹಾಳೆಗಳ ಮೇಲೆ ಮುದ್ರಿಸಿರುವ ಸೂಚನೆಗಳನ್ನು ಅಭ್ಯರ್ಥಿಗಳು ಓದಿಕೊಳ್ಳತಕ್ಕದ್ದು. ಓ.ಎಂ.ಆರ್. ಉತ್ತರ ಹಾಳೆಯ ಮೇಲ್ಭಾಗದ ಅಂಕಣದಲ್ಲಿ ನೋಂದಣಿ ಸಂಖ್ಯೆ, ಪ್ರಶ್ನೆ ಪತ್ರಿಕೆಯ ಸರಣಿ (Series of Question Paper) ಪರೀಕ್ಷಾ ಪತ್ರದಲ್ಲಿ ನಮೂದಿಸಿರುವಂತೆ ಕೇಂದ್ರದ ಸಂಖ್ಯೆ (Centre Code) ಮತ್ತು ಪರೀಕ್ಷಾ ಉಪ ಕೇಂದ್ರದ ಸಂಖ್ಯೆ (Sub Centre Code) / ಮತ್ತಿತರ ಕೋರಿದ ಕೋಡ್ ಮಾಹಿತಿಗಳನ್ನು ಬರೆದು, ಇವುಗಳಿಗೆ ಹೊಂದಿಕೊಂಡಂತಿರುವ ವೃತ್ತಗಳನ್ನು ಬಾಲ್ ಪಾಯಿಂಟ್ ಪೆನ್ನಿನಿಂದ ಶೇಡ್ ಮಾಡತಕ್ಕದ್ದು.

(6) ಪೂರ್ವಾಹ್ನ 10.00 ಗಂಟೆಗೆ ಮತ್ತು ಮಧ್ಯಾಹ್ನ 2.00 ಗಂಟೆಗೆ ಕೊಠಡಿಯ ಸಂವೀಕ್ಷಕರು ಪ್ರಶ್ನೆ ಪುಸ್ತಿಕೆಯನ್ನು ವಿತರಿಸುತ್ತಾರೆ. ಅಭ್ಯರ್ಥಿಯು ಸಂಖೀಕರಣ, ದೋಷಪೂರಿತ ಪುಟಗಳು ಅಥವಾ ಇತರೆ ದೋಷಗಳ ಬಗ್ಗೆ ಪ್ರಶ್ನೆ ಪುಸ್ತಿಕೆ ಮತ್ತು ಓ.ಎಂ.ಆರ್. ಉತ್ತರ ಹಾಳೆಯನ್ನು ಪರಿಶೀಲಿಸಿ, ಖಚಿತಪಡಿಸಿಕೊಳ್ಳತಕ್ಕದ್ದು. ಯಾವುದೇ ದೋಷ ಕಂಡು ಬಂದಲ್ಲಿ ಕೂಡಲೇ ಅದೇ ಶ್ರೇಣಿಯ ಪ್ರಶ್ನೆ ಪುಸ್ತಿಕೆ ಅಥವಾ ಓ.ಎಂ.ಆರ್ ಉತ್ತರ ಹಾಳೆಯನ್ನು ಬದಲಿಸಿಕೊಳ್ಳತಕ್ಕದ್ದು. ಪ್ರಶ್ನೆ ಪುಸ್ತಿಕೆಯ ಶ್ರೇಣಿಯನ್ನು ಓ.ಎಂ.ಆರ್. ಉತ್ತರ ಹಾಳೆಯಲ್ಲಿ ಗುರುತಿಸಿ ನಂತರ ಉತ್ತರಿಸಲು ಪ್ರಾರಂಭಿಸತಕ್ಕದ್ದು.

(7) ಅಭ್ಯರ್ಥಿಯು ಉತ್ತರ ಹಾಳೆಯನ್ನು ಮಡಿಸುವುದಾಗಲೀ ಅಥವಾ ವಿಶೇಷವಾದ ಗುರುತು ಮಾಡಿ ಹಾಳು ಮಾಡತಕ್ಕದ್ದಲ್ಲ. ಬ್ಲೇಡ್, ಫ್ಲೂಯಿಡ್ ಮತ್ತು ರಬ್ಬರನ್ನು ತಪ್ಪಾದ ಉತ್ತರವನ್ನು ಸರಿಪಡಿಸಲು ಬಳಸಿದರೆ ಅಂತಹ ಉತ್ತರ ಹಾಳೆಯು ಸಿಂಧುವಾಗಿರುವುದಿಲ್ಲ ಹಾಗೂ ಅಂತಹ ಹಾಳೆಯನ್ನು ಕಂಪ್ಯೂಟರ್ ಸ್ಕ್ಯಾನ್ ಮಾಡುವುದಿಲ್ಲ. ತಪ್ಪಾಗಿ ಶೇಡ್ ಮಾಡಿದ ವೃತ್ತಗಳನ್ನು ಮರೆಮಾಚಲು ಮಾರ್ಕರ್‌ಗಳ ಬಳಕೆಗೆ ಅವಕಾಶವಿಲ್ಲ.

(8) ಪ್ರಶ್ನೆ ಪುಸ್ತಿಕೆಯಲ್ಲಿ ನೀಡಲಾದ ಖಾಲಿ ಹಾಳೆಗಳಲ್ಲಿ ಮಾತ್ರ ರಫ್‌ವರ್ಕ್ ಮಾಡತಕ್ಕದ್ದು.

(9) ಅಭ್ಯರ್ಥಿಗಳು ಯಾವುದೇ ಇತರ ಅಭ್ಯರ್ಥಿಯ ಉತ್ತರ ಪತ್ರಿಕೆಯಿಂದ ನಕಲು ಮಾಡುವುದನ್ನು ಅಥವಾ ತಮ್ಮ ಉತ್ತರ ಪತ್ರಿಕೆಯಿಂದ ನಕಲು ಮಾಡಲು ಅವಕಾಶ ನೀಡುವುದನ್ನು ಅಥವಾ ಯಾವುದೇ ರೀತಿಯ ನೆರವು ನೀಡುವುದು ಅಥವಾ ನೀಡಲು ಪ್ರಯತ್ನಿಸುವುದು ಅಥವಾ ಪಡೆಯುವುದು ಅಥವಾ ಪಡೆಯಲು ಪ್ರಯತ್ನಿಸುವುದನ್ನು ನಿಷೇಧಿಸಿದೆ. ಅಂತಹ ಕೃತ್ಯಗಳನ್ನು ದುರಾಚಾರವೆಂದು ಪರಿಗಣಿಸಿ ನಿಯಮಾವಳಿ ರೀತ್ಯಾ ಶಿಸ್ತು ಕ್ರಮ ಕೈಗೊಳ್ಳಲಾಗುವುದು.

(10) ಅಭ್ಯರ್ಥಿಗಳು ಪರೀಕ್ಷಾ ಕೊಠಡಿಯಲ್ಲಿ ತಮ್ಮ ಹತ್ತಿರ ಮೊಬೈಲ್ ಫೋನ್ ಅನ್ನು ಇಟ್ಟುಕೊಂಡಿದ್ದಲ್ಲಿ ಅಂತಹ ಅಭ್ಯರ್ಥಿಗಳನ್ನು ಡಿಬಾರ್ ಮಾಡಲಾಗುವುದು.

(11) ಪರೀಕ್ಷಾ ಮೇಲ್ವಿಚಾರಕರು / ಸಂವೀಕ್ಷಕರು ನೀಡಬಹುದಾದ ಕೆಲವೊಂದು ಸೂಚನೆಗಳಿಗೆ ಅಭ್ಯರ್ಥಿಗಳು ಬದ್ಧರಾಗಿರತಕ್ಕದ್ದು. ಒಂದು ವೇಳೆ ಅಭ್ಯರ್ಥಿಯು ಸದರಿ ಸೂಚನೆಗಳನ್ನು ಪಾಲಿಸಲು ವಿಫಲರಾದಲ್ಲಿ ಅಥವಾ ಸ್ವೇಚ್ಛಾಚಾರವಾಗಿ / ಅಕ್ರಮವಾಗಿ ಅಥವಾ ಅನುಚಿತವಾಗಿ / ಅಸಭ್ಯವಾಗಿ ವರ್ತಿಸಿದಲ್ಲಿ ಆಯೋಗವು ಅಂತಹ ಅಭ್ಯರ್ಥಿಗಳನ್ನು ಪರೀಕ್ಷೆಯಿಂದ ಖಾಯಂ ಆಗಿ ಅಥವಾ ನಿರ್ದಿಷ್ಟ ಅವಧಿಯವರೆಗೆ ಉಚ್ಚಾಟಿಸಲಾಗುವಂತಹ ಶಿಸ್ತಿನ ಕ್ರಮಕ್ಕೆ ಒಳಗಾಗುವರು.

(12) ಬೆಳಗಿನ ಅಧಿವೇಶನದಲ್ಲಿ ಕೊನೆಯ ಬೆಲ್ ಅನ್ನು 12.00 ಘಂಟೆಗೆ ಹಾಗೂ ಮಧ್ಯಾಹ್ನದ ಅಧಿವೇಶನಕ್ಕೆ 4.00 ಘಂಟೆಗೆ ಬಾರಿಸಲಾಗುವುದು. ಆ ತಕ್ಷಣ ಅಭ್ಯರ್ಥಿಗಳು ಉತ್ತರಿಸುವುದನ್ನು ನಿಲ್ಲಿಸತಕ್ಕದ್ದು.

(13) ಅಭ್ಯರ್ಥಿಯು ಪ್ರತಿ ಪತ್ರಿಕೆಗೆ ನಿಗದಿಪಡಿಸಿದ ಸಂಪೂರ್ಣ ಅವಧಿ ಮುಗಿಯುವವರೆಗೂ ಪರೀಕ್ಷಾ ಕೊಠಡಿಯಿಂದ ಹೊರಹೋಗುವಂತಿಲ್ಲ. ಪ್ರತಿ ಪತ್ರಿಕೆಯ ಮುಕ್ತಾಯದ ಅವಧಿಯ ನಂತರ, ಅಭ್ಯರ್ಥಿಯು ಉತ್ತರಿಸುವ ಹಾಳೆಯನ್ನು ಸಂವೀಕ್ಷಕರಿಗೆ ನೀಡಿ, ಅದರ **Replica** ಪ್ರತಿಯನ್ನು (ಡ್ಯೂಪ್ಲಿಕೇಟ್) ಪಡೆದುಕೊಳ್ಳತಕ್ಕದ್ದು ಹಾಗೂ ಸಂವೀಕ್ಷಕರು ಎಲ್ಲಾ ಅಭ್ಯರ್ಥಿಗಳ ಉತ್ತರ ಹಾಳೆಗಳನ್ನು ಪಡೆದು ಅದನ್ನು ಎಣಿಸುವವರೆಗೂ ಎಲ್ಲರೂ ಅವರವರ ಆಸನಗಳಲ್ಲಿಯೇ ಕುಳಿತಿರತಕ್ಕದ್ದು.

(14) ಪರೀಕ್ಷೆಗೆ ಪ್ರವೇಶವು ಸಂಪೂರ್ಣವಾಗಿ ತಾತ್ಕಾಲಿಕವಾಗಿರುತ್ತದೆ. ಪ್ರವೇಶ ಪತ್ರ ಪಡೆದ ಮಾತ್ರಕ್ಕೆ ಆಯೋಗವು ನಿಮ್ಮ ಅಭ್ಯರ್ಥಿತ್ವವನ್ನು ಅಂಗೀಕರಿಸಿದೆ ಎಂದು ಭಾವಿಸತಕ್ಕದ್ದಲ್ಲ.

**ಸೂಚನೆಗಳು:–**

(1) ಯಾವುದೇ ಅಭ್ಯರ್ಥಿಯು ತನಗೆ ನೀಡಿದ ಪ್ರಶ್ನೆ ಪುಸ್ತಿಕೆ / ಪ್ರವೇಶ ಪತ್ರ ಇವುಗಳ ಮೇಲೆ ಏನನ್ನೂ ಬರೆಯಕೂಡದು. ಇದಕ್ಕೆ ತಪ್ಪಿದಲ್ಲಿ ಅದನ್ನು ದುರ್ನಡತೆಯೆಂದು ಪರಿಗಣಿಸಿ ನಿಯಮಾನುಸಾರ ಶಿಸ್ತು ಕ್ರಮವನ್ನು ಜರುಗಿಸಲಾಗುವುದು.

(2) ಅಭ್ಯರ್ಥಿಯು ಎರಡೂ ಪತ್ರಿಕೆಗಳಿಗೆ ಹಾಜರಾಗಿ ಪರೀಕ್ಷೆ ಬರೆಯತಕ್ಕದ್ದು. ಯಾವುದಾದರೊಂದು ಪತ್ರಿಕೆಗೆ ಗೈರುಹಾಜರಾದಲ್ಲಿ ಅಂತಹವರನ್ನು ಮುಖ್ಯ ಪರೀಕ್ಷೆಯ ಅರ್ಹತೆಗೆ ಪರಿಗಣಿಸಲಾಗುವುದಿಲ್ಲ.

(3) ಯಾವುದೇ ಸಂದರ್ಭಗಳಲ್ಲಿ ಪರೀಕ್ಷಾ ಕೇಂದ್ರ ಬದಲಾವಣೆಗೆ ಅವಕಾಶವಿರುವುದಿಲ್ಲ.

(4) ಪ್ರಶ್ನೆ ಪತ್ರಿಕೆಯ ಬಗ್ಗೆ ಯಾವುದೇ ಆಕ್ಷೇಪಣೆ ಇದ್ದಲ್ಲಿ, ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಆಯಾ ಪರೀಕ್ಷಾ ದಿನವೇ ಸಂಬಂಧಿತ ಮೇಲ್ವಿಚಾರಕರಿಗೆ ಹೆಸರು, ವಿಳಾಸ, ನೋಂದಣಿ ಸಂಖ್ಯೆ, ಇತ್ಯಾದಿಗಳನ್ನು ನಮೂದಿಸಿ ಲಿಖಿತ ಮನವಿಯನ್ನು ಸಲ್ಲಿಸಿ ಸ್ವೀಕೃತಿ (**Acknowledgement**) ಪಡೆಯಬೇಕು. ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಾರ್ಯದರ್ಶಿ,**

ಕರ್ನಾಟಕ ಲೋಕಸೇವಾ ಆಯೋಗ.

# ವಿಶೇಷ ರಾಜ್ಯ ಪತ್ರಿಕೆ



| ಭಾಗ – V | ಬೆಂಗಳೂರು, ಶನಿವಾರ, ಫೆಬ್ರವರಿ ೨೮, ೨೦೧೫ (ಫಾಲ್ಗುಣ ೦೯, ಶಕ ವರ್ಷ ೧೯೩೬) | ನಂ. ೧೯೦ |
|---|---|---|
| **Part – V** | **Bengaluru, Saturday, February 28, 2015 (Phalguna 09, Shaka Varsha 1936)** | **No. 190** |



**ಕರ್ನಾಟಕ ಅಗ್ನಿಶಾಮಕ ಮತ್ತು ತುರ್ತು ಸೇವಾ ಇಲಾಖೆ, ಬೆಂಗಳೂರು.**

**ಅಧಿಸೂಚನೆ ಸಂಖ್ಯೆ:ಸಿಬ್ಬಂದಿ(7)01/ನೇಮಕಾತಿ/2014–15 ದಿನಾಂಕ:21–02–2015**

**ವಿಷಯ: ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗಳ ನೇರ ನೇಮಕಾತಿ – 2015 ಕುರಿತು.**

**1)** ಕರ್ನಾಟಕ ರಾಜ್ಯ ಅಗ್ನಿಶಾಮಕ ಮತ್ತು ತುರ್ತು ಸೇವಾ ಇಲಾಖೆಯಲ್ಲಿ ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗಳಿಗೆ ನೇರನೇಮಕಾತಿಗಾಗಿ ಈ ಕೆಳಕಾಣಿಸಿದ ನಿಯಮಗಳಿಗೆ ಕಾಲಕಾಲಕ್ಕೆ ಆಗುವ ತಿದ್ದುಪಡಿಗಳ ಅನುಸಾರ ಈ ಅಧಿಸೂಚನೆಯನ್ನು ಪ್ರಕಟಿಸುತ್ತ ಅರ್ಹ ಪುರುಷ ಅಭ್ಯರ್ಥಿಗಳಿಂದ ಆನ್–ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

- ಕರ್ನಾಟಕ ರಾಜ್ಯ ಅಗ್ನಿಶಾಮಕ ಮತ್ತು ತುರ್ತು ಸೇವೆಗಳು (ವೃಂದ ಮತ್ತು ನೇಮಕಾತಿ) ನಿಯಮ 2013(ಹೆಚ್‌ಡಿ 146 ಎಸ್ ಎಫ್ ಬಿ 2008(ಭಾಗ) ದಿನಾಂಕ 10–09–2013).
- ನೇರ ನೇಮಕಾತಿಗೆ ಅನುಮತಿ ನೀಡಿರುವ ಸರ್ಕಾರಿ ಆದೇಶ ಸಂಖ್ಯೆ: ಒಇ 225 ಕಅಸೇ 2013 ದಿನಾಂಕ 07–11–2014.
- ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013.
- ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ)(ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು, 2013,
- ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ)ನಿಯಮಾವಳಿ 1977.

**ಅರ್ಜಿಗಳನ್ನು ಆನ್–ಲೈನ್ (On-line) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು.**

**ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.**

**2) ಹೈದರಾಬಾದ್–ಕರ್ನಾಟಕ ಮೀಸಲಾತಿ ಕೋರುವ ಅಭ್ಯರ್ಥಿಗಳಿಗೆ ಸೂಚನೆ.**

2.1) **ಭಾರತ ಸಂವಿಧಾನದ ಅನುಚ್ಛೇದ 371(ಜೆ) ಅನುಷ್ಠಾನಕ್ಕೆ ಸಂಬಂಧಿಸಿದಂತೆ, ಹೊರಡಿಸಲಾದ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013 ಹಾಗೂ ಸದರಿ ಆದೇಶಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ತಿದ್ದುಪಡಿಯಂತೆ ಮೀಸಲಾತಿಗೆಂದು ಗುರುತಿಸಿ, ಸ್ಥಳೀಯ ವೃಂದಕ್ಕೆ ಒಳಪಡುವ ಹುದ್ದೆಗಳನ್ನು ಪ್ರತ್ಯೇಕವಾಗಿ ನೀಡಲಾಗಿರುತ್ತದೆ. ಸ್ಥಳೀಯ ವೃಂದದ ಹುದ್ದೆಗಳನ್ನು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾರಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರ ಕಂಡಿಕೆ 2(1)(ಎಫ್) ಅರ್ಥ ವಿವರಣೆಯ ಅಡಿಯಲ್ಲಿ ವರ್ಗೀಕರಿಸಲು ಅರ್ಹವಿರುವ ಅಭ್ಯರ್ಥಿಗಳಿಂದ ಮಾತ್ರ ತುಂಬಲಾಗುವುದು. ಈ ಹಿನ್ನೆಲೆಯಲ್ಲಿ, ಸ್ಥಳೀಯ ವೃಂದದಲ್ಲಿ ಲಭ್ಯವಿರುವ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಸಾರ್ವಜನಿಕ ಉದ್ಯೋಗ ಆದೇಶದಂತೆ ಅರ್ಹ ಸ್ಥಳೀಯ ವ್ಯಕ್ತಿಗಳು ಮಾತ್ರ ಅರ್ಹರಿರುತ್ತಾರೆ. ಮಿಕ್ಕುಳಿದ ವೃಂದದಲ್ಲಿ ಲಭ್ಯವಿರುವ ಖಾಲಿ ಹುದ್ದೆಗಳಿಗೆ ಇತರರೊಂದಿಗೆ ಸ್ಥಳೀಯ ವ್ಯಕ್ತಿಗಳು ಸಹ ಅರ್ಜಿ ಸಲ್ಲಿಸುವ ಅವಕಾಶ ಕಲ್ಪಿಸಲಾಗಿರುತ್ತದೆ.**

2.2) **ಹೈದರಾಬಾದ್–ಕರ್ನಾಟಕ ಮೀಸಲಾತಿ ಹೊಂದಿರುವ ಸ್ಥಳೀಯ ಅಭ್ಯರ್ಥಿಗಳು ಹೈದರಾಬಾದ್–ಕರ್ನಾಟಕ ಮೀಸಲಾತಿಯಡಿ ಮೀಸಲಾಗಿರುವ (ಸ್ಥಳೀಯ ವೃಂದದ) ಹಾಗೂ ಮಿಕ್ಕುಳಿದ (ಸ್ಥಳೀಯೇತರ ವೃಂದದ) ಹುದ್ದೆಗಳಿಗೂ ಅರ್ಜಿ ಸಲ್ಲಿಸಿ ಎರಡು ವೃಂದಗಳಲ್ಲಿಯೂ ಅರ್ಹರಾದರೆ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಆದ್ಯತೆಯನುಸಾರ ಅರ್ಹತೆಯನ್ನು ಪರಿಗಣಿಸಲಾಗುವುದು.**

2.3) **ಹೈದರಾಬಾದ್–ಕರ್ನಾಟಕ ಮೀಸಲಾತಿ ಹೊಂದಿರದ ಅಭ್ಯರ್ಥಿಗಳು ಹೈದರಾಬಾದ್–ಕರ್ನಾಟಕ ಮೀಸಲಾತಿಯಡಿಮೀಸಲಿರಿಸಲಾಗಿರುವ ಹುದ್ದೆಗಳಿಗೆ ಅರ್ಜಿ ಸಲ್ಲಿಸುವಂತಿಲ್ಲ. ಆದ್ದರಿಂದ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವಾಗ ಮೇಲ್ಕಂಡ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಅರ್ಜಿ ಸಲ್ಲಿಸಬೇಕಾಗಿರುತ್ತದೆ.**

2.4) **ಯಾವುದೇ ಹಂತದಲ್ಲಿಯು ಅಭ್ಯರ್ಥಿಯು ಅರ್ಜಿಯಲ್ಲಿ ಕೋರಿರುವ ಮೀಸಲಾತಿಗಳ ಬದಲಾವಣೆಗೆ ಅವಕಾಶವಿರುವುದಿಲ್ಲ.**

2.5) **ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ/ಅಂಶಗಳು / ಮೀಸಲಾತಿಗಳನ್ನು ಆಧರಿಸಿ ನೇಮಕಾತಿ ಪ್ರಕ್ರಿಯೆಗೆಅವಕಾಶ ಕಲ್ಪಿಸಿರುವುದರಿಂದ ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಯಾವುದೇ ಮೀಸಲಾತಿ ಬದಲಾವಣೆ ಕೋರಿಸಲ್ಲಿಸುವ ಮನವಿಯನ್ನು ಪರಿಗಣಿಸಲಾಗುವುದಿಲ್ಲ.**

3) **ಶುಲ್ಕ:**

| | |
|---|---|
| ಸಾಮಾನ್ಯ ವರ್ಗ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | ₹. 250/- |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1ಕ್ಕೆ ಸೇರಿದ ಅಭ್ಯರ್ಥಿಗಳಿಗೆ | ₹. 100/- |

ನಿಗದಿತ ಶುಲ್ಕವನ್ನು State Bank of Mysore / State Bank of Hyderabadಗಳ ಅಧಿಕೃತಶಾಖೆಗಳಲ್ಲಿ ಬ್ಯಾಂಕಿನ ಕಛೇರಿ ವೇಳೆಯಲ್ಲಿ ಚಲನ್ ನೀಡಿ ಹಣ ಪಾವತಿಸಬೇಕು.**ಬ್ಯಾಂಕ್ ಶುಲ್ಕ ರೂ.10/- ಪ್ರತ್ಯೇಕ.**

**ಟಿಪ್ಪಣಿ:**

ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲಅಥವಾ ಅದನ್ನು ನೇಮಕಾತಿ ಸಮಿತಿಯು ನಡೆಸುವ ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಮೇಲಿನ ಕಾಲಂಗಳಲ್ಲಿ ನಮೂದಿಸಿದಂತೆ ಅಭ್ಯರ್ಥಿಗೆ ಅನ್ವಯಿಸುವ ಒಟ್ಟು ಶುಲ್ಕವನ್ನು**ನಗದು ರೂಪದಲ್ಲಿ ಮಾತ್ರ**ಪಾವತಿಸತಕ್ಕದ್ದು. (ಪಾವತಿಸುವ ವಿವರಗಳನ್ನು ಈ ಕೆಳಗಿನ ಪ್ಯಾರಾದಲ್ಲಿ ನೀಡಲಾಗಿದೆ).**ಡಿಡಿ,ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ.**

4) **ಆನ್-ಲೈನ್ (On-line) ಮುಖಾಂತರ ಅರ್ಜಿ ಸಲ್ಲಿಸುವ ಹಾಗೂ ಶುಲ್ಕ ಪಾವತಿಸುವ ವಿಧಾನ :**

ಅರ್ಜಿದಾರ ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಮಾಹಿತಿಸೂಚಿ/ಸೂಚನೆಗಳನ್ನು ಜಾಗರೂಕತೆಯಿಂದಓದಿಕೊಂಡು ಭರ್ತಿ ಮಾಡಬೇಕು.ಇಲಾಖೆಯ ಅಧಿಕೃತ ವೆಬ್‌ಸೈಟ್ www.ksfesonline.inನಲ್ಲಿ ನೀಡಲಾಗಿರುವಸೂಚನೆಗಳನ್ನು ಓದಿಕೊಂಡು ಇರುವ ಅರ್ಜಿಯನ್ನು ಆನ್‌ಲೈನ್ ಮುಖಾಂತರ ಯಾವುದೇ ತಪ್ಪು ಮಾಹಿತಿಯನ್ನುನೀಡದೇ ಭರ್ತಿ ಮಾಡತಕ್ಕದ್ದು.ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದ್ದಲ್ಲಿ ಅಂತಹವರ ವಿರುದ್ಧ ನೇಮಕಾತಿಸಮಿತಿಯು ಕಾನೂನಿನನ್ವಯ ಸೂಕ್ತ ಕ್ರಮ ಕೈಗೊಳ್ಳಲಾಗುವುದು. ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅರ್ಜಿದಾರಒಂದು ಬಿಳಿ ಹಾಳೆಯ ಮೇಲೆ ಪಾಸ್‌ಪೋರ್ಟ್ ಅಳತೆಯ ಬಣ್ಣದ ಭಾವಚಿತ್ರವನ್ನು ಮತ್ತು ಸಹಿಯನ್ನು ಪ್ರತ್ಯೇಕವಾಗಿ(Soft Copy - less than 250 KB) ಸ್ಕ್ಯಾನ್ ಮಾಡಿಟ್ಟುಕೊಂಡಿರಬೇಕು.ನಂತರ ಅರ್ಜಿದಾರನ ಹೆಸರು, ಜಾತಿ, ಮೀಸಲಾತಿಗಳ ವಿವರ, ಹುಟ್ಟಿದ ದಿನಾಂಕ ಮತ್ತು ಇತ್ಯಾದಿ ವಿವರಗಳನ್ನು ಭರ್ತಿ ಮಾಡಿ ಕೊನೆಯದಾಗಿ ಸ್ಕ್ಯಾನ್‌ಮಾಡಿಟ್ಟುಕೊಂಡಿರುವ ಭಾವಚಿತ್ರ ಮತ್ತು ಸಹಿಯನ್ನು ಕಂಪ್ಯೂಟರ್ ಮುಖೇನ ಅಪ್‌ಲೋಡ್ (Upload)ಮಾಡುವುದು.ಇಲ್ಲವಾದಲ್ಲಿ ಅಂತಹ ಅರ್ಜಿದಾರರು ಆನ್‌ಲೈನ್‌ನಲ್ಲಿ ಅರ್ಜಿಯನ್ನು ತುಂಬಿ ಮುಂದುವರೆಯಲು ಸಾಧ್ಯವಾಗುವುದಿಲ್ಲ. ಅರ್ಜಿದಾರ ನೀಡಿರುವ ವಿವರಗಳು ಎಲ್ಲಾ ರೀತಿಯಿಂದಲೂ ಸಮರ್ಪಕವಾಗಿದ್ದಲ್ಲಿ ಮಾತ್ರ ಚಲನ್‌ಮುದ್ರಿಸಬಹುದು.ಚಲನ್ ಮುದ್ರಿಸಲು ಜನರೇಟ್ ಚಲನ್ ಬಟನ್ ಮೇಲೆ ಕ್ಲಿಕ್ ಮಾಡಿದಾಗ ತ್ರಿಪ್ರತಿ (Triplicate)ಬ್ಯಾಂಕ್ ಚಲನ್ ಸೃಜನೆಯಾಗುತ್ತದೆ.ಆ ಚಲನ್‌ನಲ್ಲಿ ಅರ್ಜಿಯ ಸಂಖ್ಯೆಯೊಂದಿಗೆ, ಆಯ್ಕೆ ಮಾಡಿರುವ ಘಟಕ, ನಿಮ್ಮಭಾವಚಿತ್ರ, ಪ್ರವರ್ಗ, ಮೀಸಲಾತಿಗಳ ವಿವರ ಮತ್ತು ಪಾವತಿಸಬೇಕಾಗಿರುವ ನಿಗದಿತ ಶುಲ್ಕಗಳ ವಿವರಗಳು ಇರುತ್ತವೆ.ಆ ಚಲನ್ ಪ್ರತಿಯನ್ನು ಮುದ್ರಿಸಿ/ಪ್ರಿಂಟ್ ಮಾಡಿಕೊಳ್ಳತಕ್ಕದ್ದು.ನಂತರ ಅರ್ಜಿದಾರ ಮುದ್ರಿಸಿಕೊಳ್ಳಲಾದ ಚಲನ್‌ನಲ್ಲಿ ನಮೂದಾಗಿರುವ ಒಟ್ಟು ಪರೀಕ್ಷಾ ಶುಲ್ಕವನ್ನು ನಗದುರೂಪದಲ್ಲಿಯೇ ಅಧಿಕೃತ ಎಸ್.ಬಿ.ಎಂ ಅಥವಾ ಎಸ್.ಬಿ.ಹೆಚ್ ಬ್ಯಾಂಕ್ ಶಾಖೆಗಳಲ್ಲಿ ಪಾವತಿಸಬೇಕು. ಶುಲ್ಕ ಪಾವತಿಸಿದನಂತರ ಚಲನ್‌ನ 'ಅಭ್ಯರ್ಥಿ ಪ್ರತಿ'ಯನ್ನು ಇಟ್ಟುಕೊಂಡಿರತಕ್ಕದು.ಅಭ್ಯರ್ಥಿಯು ಶುಲ್ಕ ಪಾವತಿಸಿದ ಮರುದಿನ ಪುನಃ ಇಲಾಖೆಯ ಅಧಿಕೃತ ವೆಬ್‌ಸೈಟ್www.ksfesonline.inನಲ್ಲಿ My Applicationನ್ನು ಕ್ಲಿಕ್ ಮಾಡಿ, ತಮ್ಮ ಅರ್ಜಿ ಸಂಖ್ಯೆ ಮತ್ತು ಜನ್ಮ ದಿನಾಂಕನಮೂದಿಸಿದ ನಂತರವೇ ಅರ್ಜಿ ತೆರೆಯುತ್ತದೆ ಹಾಗೂ ಅಭ್ಯರ್ಥಿಯು ಭರ್ತಿ ಮಾಡಿರುವ ಎಲ್ಲಾ ವಿವರಗಳನ್ನುಒಳಗೊಂಡಂತೆ ಅರ್ಜಿಯು ಸೃಜನೆಯಾಗುತ್ತದೆ, ಸದರಿ ಅರ್ಜಿಯ ಪ್ರತಿಯನ್ನು ಪ್ರಿಂಟ್ ಮಾಡಿಟ್ಟುಕೊಳ್ಳತಕ್ಕದ್ದು.ಅರ್ಜಿ ಪ್ರತಿ ಮತ್ತು ಅರ್ಜಿ ಸಂಖ್ಯೆಯು ನೇಮಕಾತಿ ಪ್ರಕ್ರಿಯೆಯ ಮುಂದಿನ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ.

- **ಅರ್ಜಿ ಸಲ್ಲಿಸಲು ಪ್ರಾರಂಭದ ದಿನಾಂಕ: 06.03.2015, ಬೆಳಿಗ್ಗೆ 10.00 ಗಂಟೆಯಿಂದ**
- **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:05.04.2015, ಸಂಜೆ 06.00 ಗಂಟೆಯವರೆಗೆ**
- **ಅಧಿಕೃತ ಬ್ಯಾಂಕ್ ಶಾಖೆಗಳ ಕಛೇರಿ ವೇಳೆಯಲ್ಲಿ ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ:07.04.2015**

**ಸೂಚನೆ:**

4.1) ಕರ್ನಾಟಕ ರಾಜ್ಯ ಅಗ್ನಿಶಾಮಕ ಮತ್ತು ತುರ್ತು ಸೇವಾಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ನೀಡಲಾಗಿರುವ ಅರ್ಜಿಯನ್ನು ಭರ್ತಿ ಮಾಡಿ, ನಿಗದಿತದಿನಾಂಕದೊಳಗೆ ಸಲ್ಲಿಸಲಾಗುವ ಅರ್ಜಿಯನ್ನು ಮಾತ್ರ ಪರಿಗಣಿಸಲಾಗುವುದು.

4.2) ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿ ಮಾಡುವ ಸಂದರ್ಭದಲ್ಲಿ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ(Help line) 080-22971605/6 ಅನ್ನು ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿ ಮಾಡುವ ಸಂದರ್ಭದಲ್ಲಿ ತಾಂತ್ರಿಕ ತೊಂದರೆ ಎದುರಾದಲ್ಲಿಅದನ್ನು ಸ್ಥಗಿತಗೊಳಿಸಿ ಮತ್ತೊಮ್ಮೆ ಅಧಿಕೃತ ವೆಬ್‌ಸೈಟ್‌ನಲ್ಲಿ ನೀಡಲಾಗಿರುವ ಅರ್ಜಿಯನ್ನು ಭರ್ತಿ ಮಾಡಲುತಿಳಿಸಲಾಗಿದೆ.

**ಈ ಕೆಳಗೆ ನಮೂದಿಸಿರುವ ಖಾಲಿ ಹುದ್ದೆಗಳ ಸಂಖ್ಯೆ ತಾತ್ಕಾಲಿಕವಾಗಿದ್ದು, ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಬದಲಾವಣೆ ಮಾಡಲಾಗುವುದು.**

**ಅಗ್ನಿಶಾಮಕ ಠಾಣಾಧಿಕಾರಿ–87 ಹುದ್ದೆಗಳು**

(ಕರ್ನಾಟಕ ರಾಜ್ಯ ಅಗ್ನಿಶಾಮಕ ಮತ್ತು ತುರ್ತು ಸೇವಾಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ವರ್ಗೀಕರಣಕ್ಕೆ **ಅನುಬಂಧ–'ಅ'** ಅನ್ನು ನೋಡಿ)

5) **ಅರ್ಹತಾ ಷರತ್ತುಗಳು :**

5.1) ಭಾರತೀಯ ನಾಗರೀಕನಾಗಿರತಕ್ಕದ್ದು.

5.2) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಅಭ್ಯರ್ಥಿಯುಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

5.3) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತನಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

6) **ವಯೋಮಿತಿ:**

6.1) **ಸಾಮಾನ್ಯ ಅಭ್ಯರ್ಥಿಗಳಿಗೆ:**

ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 05.04.2015 ಕ್ಕೆ ಅಭ್ಯರ್ಥಿಗೆಕನಿಷ್ಟ21ವರ್ಷ ವಯಸ್ಸಾಗಿರಬೇಕು ಹಾಗೂ ಈ ಕೆಳಕಂಡ ವಯಸ್ಸು ಮೀರಿರಬಾರದು.

6.1.1) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 28ವರ್ಷಗಳು

6.1.2) ಇತರೆ ಅಭ್ಯರ್ಥಿಗಳಿಗೆ 26 ವರ್ಷಗಳು

6.2) **ಸೇವಾ ನಿರತ ಅಭ್ಯರ್ಥಿಗಳಿಗೆ.**

(05.04.2015 ಕ್ಕೆ ಕನಿಷ್ಟ 08 ವರ್ಷಗಳ ಸೇವಾವಧಿಯನ್ನು ಪೂರೈಸಿರುವ ಅಗ್ನಿಶಾಮಕ / ಪ್ರಮುಖ ಅಗ್ನಿಶಾಮಕ / ಅಗ್ನಿಶಾಮಕ ಚಾಲಕ / ಚಾಲಕ ತಂತ್ರಜ್ಞ,/ ಫಿಟ್ಟರ್ ಕ್ಲಾಸ್ –II,) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 05.04.2015 ಕ್ಕೆ ಅಭ್ಯರ್ಥಿಗೆಕನಿಷ್ಟ 21 ವರ್ಷ ವಯಸ್ಸಾಗಿರಬೇಕು ಹಾಗೂ ಈ ಕೆಳಕಂಡ ವಯಸ್ಸು ಮೀರಿರಬಾರದು.

6.2.1) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 40 ವರ್ಷಗಳು

6.2.2) ಇತರೆ ಅಭ್ಯರ್ಥಿಗಳಿಗೆ 38 ವರ್ಷಗಳು

**6.3) ಮಾಜಿ ಸೈನಿಕ ಅಭ್ಯರ್ಥಿಗಳಿಗೆ :**

ಮಾಜಿ ಸೈನಿಕ ಅಭ್ಯರ್ಥಿಯು ಸೈನ್ಯ ವಿಯೋಜನೆ, ಸೇವೆಯಿಂದ ತೆಗೆದುಹಾಕಿದ ಹಾಗೂ ಸೇವಾ ನಿವೃತ್ತಿಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ "ಅವರು ಸೇವೆ ಸಲ್ಲಿಸಿದ ಅವಧಿ"ಯಜೊತೆಗೆ ಹೆಚ್ಚುವರಿ 03 ವರ್ಷಗಳ ರಿಯಾಯಿತಿಗಳನ್ನು ನೀಡಲಾಗುವುದು.ಮಾಜಿ ಯೋಧ ಎಂಬ ಶಬ್ದವುಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆ ಎಂಬ ಅರ್ಥ ಹೊಂದಿದೆ.

7) **ಮಾಜಿ ಸೈನಿಕರ ಬಗ್ಗೆ ಟಿಪ್ಪಣಿ:**

7.1) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂಸೇನೆ, ನೌಕಾಸೇನೆ ಮತ್ತು ವಾಯುಸೇನೆಯಲ್ಲಿಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧರಲ್ಲದ ಹುದ್ದೆಗಳಲ್ಲಿ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ,ಡಿಫೆನ್ಸ್ ಸೆಕ್ಯುರಿಟಿ ಕಾರ್ಪ್ಸ್ (Defence Security Corps), ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್(General Reserved Engineering Force), ಲೋಕ್ ಸಹಾಯಕ್ ಸೇನಾ (Lok Sahayak Sena)ಮತ್ತುಪ್ಯಾರಾ ಮಿಲಿಟರಿ ದಳ (Para Military Forces)ದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ:

ಮತ್ತು

7.1.1) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವವನು

**ಅಥವಾ**

7.1.2) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹಸೇವೆಯಲ್ಲಿ ಬಿಡುಗಡೆಯಾದವನು.

**ಅಥವಾ**

7.1.3) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದವನು.

**ಅಥವಾ**

7.1.4) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಯನ್ನು ಹೊರತುಪಡಿಸಿ, ನಿರ್ದಿಷ್ಟಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:

7.1.4.1) ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.

7.1.4.2) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದವರು.

7.1.4.3) ಶೌರ್ಯ ಪ್ರಶಸ್ತಿ ವಿಜೇತರು.

**ವಿವರಣೆ:** ಮಾಜಿ ಸೈನಿಕರು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ.ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆರಾಜ್ಯ ನಾಗರಿಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

7.2) ಭಾರತ ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ.36034/27/84–ಸಿಬ್ಬಂದಿ (ಎಸ್‌ಸಿಟಿ), ದಿನಾಂಕ02.05.1985 ರನ್ವಯ ಮಾಜಿ ಸೈನಿಕರು ಅವರಿಗೆ ನೀಡಿರುವ ಪ್ರಯೋಜನವಾದ ಪುನರ್ ನೇಮಕವನ್ನುಉಪಯೋಗಿಸಿಕೊಂಡು ಒಂದು ಬಾರಿ ಸರ್ಕಾರಿ ಹುದ್ದೆಗೆ ಆಯ್ಕೆಯಾದಲ್ಲಿ ಅಂತಹ ಮಾಜಿ ಸೈನಿಕರಸ್ಥಾನವು ಸರ್ಕಾರಿ ಉದ್ಯೋಗದ ಪುನರ್ ನೇಮಕಕ್ಕೆ ರದ್ದಾಗುತ್ತದೆ.ಆದ್ದರಿಂದ ಒಂದು ಬಾರಿ ಮಾಜಿ ಸೈನಿಕ ಮೀಸಲಾತಿಯನ್ನು ಉಪಯೋಗಿಸಿ ಸರ್ಕಾರಿ ಹುದ್ದೆಗೆಆಯ್ಕೆಯಾದ ಮಾಜಿ ಸೈನಿಕರು ಮತ್ತೊಮ್ಮೆ ಸದರಿ ಮೀಸಲಾತಿಯನ್ನು ಕೋರಲು ಬರುವುದಿಲ್ಲ. ಅಂತಹಮಾಜಿ ಸೈನಿಕ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು.**(ಈ ಕಾರಣದಿಂದ ಮಾಜಿ ಸೈನಿಕರುಕಡ್ಡಾಯವಾಗಿ ಅರ್ಜಿಯಲ್ಲಿ ನಿಗದಿಪಡಿಸಲಾಗಿರುವ ಕಾಲಂನ್ನು ಭರ್ತಿ ಮಾಡತಕ್ಕದ್ದು ಹಾಗೂಭೂಸೇನೆ/ನೌಕಾಸೇನೆ/ವಾಯುಸೇನೆಯಲ್ಲಿ ಸೇವೆ ಸಲ್ಲಿಸಿದಷ್ಟು ಅವಧಿಯನ್ನು ಕಡ್ಡಾಯವಾಗಿ ಭರ್ತಿಮಾಡತಕ್ಕದ್ದು)**

7.3) ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕದ ನಂತರ ಯಾವೊಬ್ಬ ಮಾಜಿ ಸೈನಿಕ ಅಭ್ಯರ್ಥಿಯು ಸರ್ಕಾರಿನೌಕರಿಯೊಂದಕ್ಕೆ ಮಾಜಿ ಸೈನಿಕ ಮೀಸಲಾತಿ ಪಡೆದು ಸೇರಿದರೆ, ಅಂತಹ ಮಾಜಿ ಸೈನಿಕ ತಾನು ನೌಕರಿಸೇರಿದ ಬಗ್ಗೆ ಪೊಲೀಸ್ ಸೂಪರಿಂಟೆಂಡೆಂಟ್/ ಪೊಲೀಸ್ ಕಮಿಷನರ್ ಕಛೇರಿಗೆ ಮಾಹಿತಿ ನೀಡತಕ್ಕದ್ದು.ಮಾಹಿತಿ ನೀಡದೆ ಇದ್ದಲ್ಲಿ ತದನಂತರ ತಿಳಿದುಬಂದರೆ ಅಂತಹ ಮಾಜಿ ಸೈನಿಕ ಅಭ್ಯರ್ಥಿಯ ಅಭ್ಯರ್ಥಿತನವನ್ನುರದ್ದುಪಡಿಸಲಾಗುವುದು.ಇಂತಹ ಅಭ್ಯರ್ಥಿಯು ಮಾಜಿ ಸೈನಿಕ ಮೀಸಲಾತಿಗೆ ಅನರ್ಹನಾಗುತ್ತಾನೆ.

7.4) ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆ ಎಂಬಅರ್ಥ ಹೊಂದಿದೆ.

7.5) ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 9(1) ರನ್ವಯ ಸೈನ್ಯದಲ್ಲಿ ಸೇವೆ ಸಲ್ಲಿಸುವಾಗಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು(ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕಮೀಸಲಾತಿಗೆ ಅರ್ಹರಾಗಿರುತ್ತಾರೆ. ಮಾಜಿ ಸೈನಿಕ ಮಕ್ಕಳಿಗೆ ವಯೋಮಿತಿ ಸಡಿಲಿಕೆ, ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಯಾವುದೇ ತರಹದ ವಿನಾಯಿತಿಯನ್ನು ನೀಡಲಾಗುವುದಿಲ್ಲ.ಕರ್ತವ್ಯ ನಿರ್ವಹಿಸುತ್ತಿದ್ದ ಸೈನ್ಯದ ಅಧಿಕಾರಿಗಳಿಂದ ಅವಲಂಭಿತ ಪ್ರಮಾಣ ಪತ್ರ ಮತ್ತು ಸೈನಿಕಬೋರ್ಡ್‌ನಿಂದ ಪ್ರಮಾಣ ಪತ್ರವನ್ನು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ **ದಿನಾಂಕ:05.04.2015**ರೊಳಗಾಗಿ ಪಡೆದಿಟ್ಟುಕೊಂಡಿರತಕ್ಕದ್ದು.

**ಟಿಪ್ಪಣಿ:** ಮೇಲಿನ ಷರತ್ತುಗಳಪ್ರಕಾರ ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಆಮೀಸಲಾತಿಗೆ ಅರ್ಹರೇ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯನ್ನುಕೋರುವುದು ಸೂಕ್ತ.

**8) <u>ವಿದ್ಯಾರ್ಹತೆ:</u>**

**ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗಳಿಗೆ ಸಂಬಂಧಿಸಿದಂತೆ :**

8.1) ಸಾಮಾನ್ಯ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳಿಗೆ.

ಮಾನ್ಯತೆ ಪಡೆದಿರುವ ವಿಶ್ವವಿದ್ಯಾನಿಲಯದಿಂದ ವಿಜ್ಞಾನ ಪದವಿ ಹೊಂದಿದ್ದು, ರಾಸಾಯನಶಾಸ್ತ್ರವನ್ನು ಒಂದು ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು(Degree in Science with Chemistry as one ofthe subject)ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ, ಅಂದರೆ 05–04–2015 ಕ್ಕೆ ಪದವಿಯನ್ನು ಹೊಂದಿರಬೇಕು.

8.2) ಸೇವಾ ನಿರತ ಅಭ್ಯರ್ಥಿಗಳಿಗೆ.

(ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ ಅಂದರೆ 05–04–2015ಕ್ಕೆ 8 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುವ ಅಗ್ನಿಶಾಮಕ / ಪ್ರಮುಖ ಅಗ್ನಿಶಾಮಕ / ಅಗ್ನಿಶಾಮಕ ಚಾಲಕ / ಚಾಲಕ ತಂತ್ರಜ್ಞ, /ಫಿಟ್ಟರ್ ಕ್ಲಾಸ್ –II)

ಮಾನ್ಯತೆ ಪಡೆದಿರುವ ವಿಶ್ವವಿದ್ಯಾನಿಲಯದಿಂದ ಯಾವುದೇ ಪದವಿ ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿದ್ದು,ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಂದರೆ 05–04–2015 ಕ್ಕೆ ಪದವಿಯನ್ನು ಹೊಂದಿರಬೇಕು.

8.3) **ಟಿಪ್ಪಣಿ:**

8.3.1) ಮೇಲೆ ನಮೂದಿಸಿದಂತೆ ವಿದ್ಯಾರ್ಹತೆಯನ್ನು ಹೊಂದದೇ ಇರುವ ಅಭ್ಯರ್ಥಿಗಳು ನೇಮಕಾತಿಪ್ರಕ್ರಿಯೆಯಲ್ಲಿ ಭಾಗವಹಿಸಿದರೂ ನಂತರ ನೇಮಕಾತಿ ಸಮಿತಿಗೆ ವಿದ್ಯಾರ್ಹತೆ ಹೊಂದಿರುವುದಿಲ್ಲವೆಂದುಪತ್ತೆಯಾದಲ್ಲಿ ಅಂತಹ ಅಭ್ಯರ್ಥಿಯ ಅಭ್ಯರ್ಥಿತನವನ್ನು ಯಾವುದೇ ಹಂತದಲ್ಲಾದರೂ ರದ್ದುಪಡಿಸಲಾಗುವುದು.

8.3.2) ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗಿರುವುದಿಲ್ಲ. ಮೇಲಿನವಿದ್ಯಾರ್ಹತೆಯನ್ನು ಹೊರತುಪಡಿಸಿ ಬೇರೆ ಯಾವ ವಿದ್ಯಾರ್ಹತೆಯನ್ನೂ ಪರಿಗಣಿಸಲಾಗುವುದಿಲ್ಲ.ಕೊನೆಯ ದಿನಾಂಕಕ್ಕೆ ಎಲ್ಲಾ ಅಭ್ಯರ್ಥಿಗಳು ನಿಗದಿತ ಪದವಿ ಪರೀಕ್ಷೆಯ ಉತ್ತೀರ್ಣ ಹೊಂದಿದ ಅಂಕಪಟ್ಟಿಯನ್ನು ಹೊಂದಿರಬೇಕು.

**9) ತರಬೇತಿ, ಖಾಯಂಪೂರ್ವ ಅವಧಿ ಮತ್ತು ವೇತನ ಶ್ರೇಣಿ :**

9.1) **ತರಬೇತಿ:**

9.1.1) ನೇಮಕಾತಿ ಹೊಂದಿದ ಅಭ್ಯರ್ಥಿಗಳು ಕರ್ನಾಟಕ ಅಗ್ನಿಶಾಮಕ ಮತ್ತು ತುರ್ತು ಸೇವೆಗಳ ಅಕಾಡೆಮಿ ಬೆಂಗಳೂರು ಅಥವಾ ಇಲಾಖೆ ತೀರ್ಮಾನಿಸಿದ ಇತರೆ ತರಬೇತಿ ಕೇಂದ್ರದಲ್ಲಿ ಆರು ತಿಂಗಳ ತರಬೇತಿಯನ್ನು ಪಡೆಯಬೇಕು.

9.1.2) ನಂತರ ಆರು ತಿಂಗಳ ಪ್ರಾಯೋಗಿಕ ತರಬೇತಿಯನ್ನು ಅಗ್ನಿಶಾಮಕ ಠಾಣೆಯಲ್ಲಿ ಪಡೆದು, ತರಬೇತಿಯ ಕೊನೆಯಲ್ಲಿ ನಿಗದಿತ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

9.2) **ಖಾಯಂಪೂರ್ವ ಅವಧಿ:**

ನೇರ ನೇಮಕಾತಿ ಮೂಲಕ ಆಯ್ಕೆಗೊಂಡ ಅಭ್ಯರ್ಥಿಗಳು ಚಾಲ್ತಿಯಲ್ಲಿರುವ ನಿಯಮಾನುಸಾರ ಮೂಲ ತರಬೇತಿ ಮತ್ತು ಪ್ರಾಯೋಗಿಕ ತರಬೇತಿ ಸೇರಿದಂತೆ ಎರಡು ವರ್ಷ ಪರಿವೀಕ್ಷಣಾ ಅವಧಿಯಾಗಿರುತ್ತದೆ.

9.3) **ವೇತನ ಶ್ರೇಣಿ:**

ರೂ.16000–400–17200–450–19000–500–21000–600–24600–700–28800–800–29600

9.4) **ಪಿಂಚಣಿ ಸೌಲಭ್ಯ :**

ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ:31.03.2006 ರಂತೆನೂತನ ಅಂಶದಾಯಿ ಪಿಂಚಣಿ ಸೌಲಭ್ಯ ಅನ್ವಯವಾಗುವುದು.

**10) ದೇಹದಾರ್ಢ್ಯತೆ ಪರೀಕ್ಷೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆ :**

**(Physical Standard Test & Physical Efficiency Test):**

ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗಳ ದಿನಾಂಕವನ್ನು ಮುಂದೆ ಜಾಹೀರಾತು ಪಡಿಸಲಾಗುವುದು ಹಾಗೂ ಇಲಾಖೆಯ ವೆಬ್‌ಸೈಟ್"http://www.ksfesonline.in"ನಲ್ಲಿ ಪ್ರಕಟಿಸಲಾಗುವುದು.ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಯ ದಿನಾಂಕ,ಸಮಯ ಮತ್ತು ಸ್ಥಳವನ್ನು ಹೊಂದಿರುವ ಪ್ರವೇಶ/ಕರೆಪತ್ರಗಳನ್ನು ಇಲಾಖೆಯ ವೆಬ್‌ಸೈಟ್‌ನಿಂದ ಅಭ್ಯರ್ಥಿಗಳು ಕಡ್ಡಾಯವಾಗಿ ಅಂತರ್ಜಾಲದ ಮುಖಾಂತರ ಡೌನ್‌ಲೋಡ್ ಮಾಡಿಕೊಳ್ಳಬೇಕು. ಅಭ್ಯರ್ಥಿಗಳಿಗೆ ಪ್ರವೇಶ ಪತ್ರಗಳನ್ನು ಪ್ರತ್ಯೇಕವಾಗಿ ರವಾನಿಸಲಾಗುವುದಿಲ್ಲ.ಪ್ರವೇಶ ಪತ್ರವಿಲ್ಲದೇ ಪಿ.ಎಸ್.ಟಿ. ಪರೀಕ್ಷೆಗಳಿಗೆ ಅನುವುಮಾಡಲಾಗುವುದಿಲ್ಲ.ಈಸಂಬಂಧ ಅಭ್ಯರ್ಥಿಗಳು ಮುಖ್ಯವಾಗಿ ಈ ಕಛೇರಿಯ ಅಧಿಕೃತ ವೆಬ್‌ಸೈಟ್ "http://www.ksfesonline.in"ಅನ್ನುಮೇಲಿಂದ ಮೇಲೆ ಗಮನಿಸುತ್ತಿರುವುದು ಸೂಕ್ತ.

10.1) ಅಭ್ಯರ್ಥಿಗಳಿಗೆ ದೇಹದಾರ್ಢ್ಯತೆ ಪರೀಕ್ಷೆಯನ್ನು ನೇಮಕಾತಿ ಪ್ರಾಧಿಕಾರ ನಿಗದಿಪಡಿಸಿದಕೇಂದ್ರಗಳಲ್ಲಿ ನಡೆಸಲಾಗುವುದು.ಆಯ್ಕೆ ಸಮಿತಿಯು ಯಾವುದೇ ಪರೀಕ್ಷಾ ಕೇಂದ್ರವನ್ನು ರದ್ದುಪಡಿಸುವ ಅಥವಾಹೊಸದಾಗಿ ಸೇರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ.ಆದ್ದರಿಂದ ಅಭ್ಯರ್ಥಿಗಳು ಇಲಾಖೆಯ ವೈಬ್‌ಸೈಟ್‌ನ್ನು ದಿನನಿತ್ಯ ನೋಡಲು ತಿಳಿಸಲಾಗಿದೆ.

10.2) ದೈಹಿಕ ಪರೀಕ್ಷೆಯು ನಡೆಯುವ ವೇಳೆ ಮತ್ತು ಸ್ಥಳವನ್ನು ಸಂಬಂಧಪಟ್ಟ ದೈಹಿಕ ಪರೀಕ್ಷೆಯ ಕೇಂದ್ರಗಳಸೂಚನಾ ಫಲಕದಲ್ಲಿಯೂ ಸಹ ಪ್ರಕಟಿಸಲಾಗುವುದು.ಕರೆಪತ್ರವನ್ನು ಪಡೆಯದೆ ಪರೀಕ್ಷೆಗೆ ಹಾಜರಾದಲ್ಲಿಅಂತಹವರಿಗೆ ದೈಹಿಕ ಪರೀಕ್ಷೆಗೆ ಅವಕಾಶ ನೀಡಲಾಗುವುದಿಲ್ಲ.

10.3) ಅಭ್ಯರ್ಥಿಗಳು ದೈಹಿಕ ಪರೀಕ್ಷೆಗೆ ಹಾಜರಾಗುವಾಗ ಹುದ್ದೆಗಳಿಗೆ ನಿಗದಿಪಡಿಸಿದ ಮೂಲದಾಖಲಾತಿಗಳು ಮತ್ತು ಮೀಸಲಾತಿ ಕೋರಿರುವ ಮೂಲ ದಾಖಲಾತಿಗಳೊಂದಿಗೆ ಹಾಜರಾಗತಕ್ಕದ್ದು.

10.4) **ಅಭ್ಯರ್ಥಿಗಳು ದೇಹದಾರ್ಢ್ಯತೆ ಪರೀಕ್ಷೆಗೆ ಬರುವಾಗ, ಕರೆಪತ್ರದ ಜೊತೆಗೆ ಈಕೆಳಕಂಡ ಯಾವುದಾದರೊಂದು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.**

10.4.1) ಪಾಸ್‌ಪೋರ್ಟ್ (Passport)

10.4.2) ಚಾಲನಾ ಪರವಾನಗಿ ಪತ್ರ (Driving License)

10.4.3) ಪ್ಯಾನ್ ಕಾರ್ಡ್ (PAN Card)

10.4.4) ರಾಜ್ಯ ಸರ್ಕಾರ/ ಕೇಂದ್ರ ಸರ್ಕಾರ / ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟಖಾಸಗೀ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ(Service IDCard)

10.4.5) ಸಾರ್ವಜನಿಕ ಬ್ಯಾಂಕುಗಳು / ಅಂಚೆ ಕಛೇರಿಗಳು ವಿತರಿಸಿರುವ ಭಾವಚಿತ್ರವಿರುವ ಪಾಸ್ ಪುಸ್ತಕ(Bank Pass Book with Photograph)

10.4.6) ಭಾವಚಿತ್ರ ಸಮೇತ ನೋಂದಣಿಯಾಗಿರುವ ಸ್ವತ್ತಿನ ದಾಖಲೆಪತ್ರ ಅಥವಾ ಪಟ್ಟಾ ಪುಸ್ತಕ (Pattasand registered deeds with Photograph)

10.4.7) ಭಾವಚಿತ್ರ ಸಮೇತ ಸಂಬಂಧಪಟ್ಟ ಪ್ರಾಧಿಕಾರಿಯವರು ವಿತರಿಸಿರುವ ಜಾತಿ ಪ್ರಮಾಣ ಪತ್ರ(Caste Certificate with Photo)

10.4.8) ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಿತರಿಸಿರುವ ಪಿಂಚಣಿ ಪುಸ್ತಕ / ಪಿಂಚಣಿ ಮಂಜೂರಾತಿ ಆಗಿರುವಆದೇಶ (Ex-servicemen's pension book/pension payment order)

10.4.9) ಎನ್.ಆರ್.ಇ.ಜಿ.ಎಸ್.ಯಿಂದ ನೀಡಿದ ಭಾವಚಿತ್ರವಿರುವ ಉದ್ಯೋಗ ಚೀಟಿ.(Job cards withPhotograph)

10.4.10) ಎಲೆಕ್ಟೋರಲ್ ಫೋಟೋ ಗುರುತಿನ ಚೀಟಿ (EPIC).

10.4.11) ಭಾರತೀಯ ಗುರುತು ಪ್ರಾಧಿಕಾರದಿಂದ ನೀಡಲಾಗಿರುವ ಆಧಾರ್ ಕಾರ್ಡ್(AADHARCARD).

10.5) ಕರೆಪತ್ರದ ಜೊತೆಗೆ ಆನ್‌ಲೈನ್ ಮುಖಾಂತರ ಸಲ್ಲಿಸಿದ ಅರ್ಜಿಯ ಜೆರಾಕ್ಸ್ ಪ್ರತಿಯನ್ನು ಸಹ ತರತಕ್ಕದ್ದು,ತಪ್ಪಿದ್ದಲ್ಲಿ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡಲಾಗುವುದಿಲ್ಲ.ನಿಗದಿತ ದಿನಾಂಕ ಹಾಗೂ ಸಮಯದಲ್ಲಿ ಹಾಜರಾಗದಿದ್ದರೆ ಅಂತಹವರನ್ನು ಅನರ್ಹಗೊಳಿಸಲಾಗುವುದುಹಾಗೂ ಬದಲಿದಿನಾಂಕವನ್ನುನೀಡಲಾಗುವುದಿಲ್ಲ.

10.6) **<u>ದೇಹದಾರ್ಢ್ಯತೆ:</u>**

ಅರ್ಜಿದಾರನು ಕರ್ನಾಟಕ ಅಗ್ನಿಶಾಮಕ ಮತ್ತು ತುರ್ತು ಸೇವೆಗಳ (ವೃಂದ ಮತ್ತು ನೇಮಕಾತಿ) ನಿಯಮಗಳು2013 ರಲ್ಲಿನ ಅಪೆಂಡಿಕ್ಸ್– "ಎ" ಯಲ್ಲಿರುವಂತೆ ಈ ಕೆಳಕಂಡ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯಗಳನ್ನು ಹೊಂದಿರಬೇಕು.

**ಅಪೆಂಡಿಕ್ಸ್ (ಎ)**

| | | |
|---|---|---|
| 1 | ಎತ್ತರ | ಕನಿಷ್ಠ 168 ಸೆಂ.ಮೀ. |
| 2 | ಎದೆ ಸುತ್ತಳತೆ | ಕನಿಷ್ಠ 81 ಸೆಂ.ಮೀ ವಿಸ್ತಾರಗೊಂಡ ನಂತರ ಕನಿಷ್ಠ 5 ಸೆಂ.ಮೀ.ಅಂದರೆ 86 ಸೆಂ.ಮೀ.ಗೆ ಕಡಿಮೆ ಇಲ್ಲದಂತೆ ಎದೆ ಸುತ್ತಳತೆ ಹೊಂದಿರಬೇಕು. |
| 3 | ತೂಕ | ಕನಿಷ್ಠ 50 ಕೆ.ಜಿ. |
| 4 | ಅನರ್ಹತೆಗಳು | ಬಾಗಿದ ಕಾಲುಗಳು, ತಾಗು ಮಂಡಿ, ಚಪ್ಪಟೆ ಪಾದ ಹೊಂದಿದ ಅಭ್ಯರ್ಥಿಗಳು ಅನರ್ಹರಾಗುವರು. |

**11) <u>ದೈಹಿಕ ಸಾಮರ್ಥ್ಯ ಪರೀಕ್ಷೆ : (Physical Fitness Test)</u>**

11.1) ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳಿಗೆ ಮಾತ್ರ ಈ ಕೆಳಕಂಡ ದೈಹಿಕ ಸಾಮರ್ಥ್ಯ ಪರೀಕ್ಷೆಗಳನ್ನು ನೆಡಸಲಾಗುವುದು.

| ಅಂಶಗಳು | ಅರ್ಹತಾ ವೇಳೆ/ದೂರ | |
|---|---|---|
| | ಸಾಮಾನ್ಯ ಅಭ್ಯರ್ಥಿಗಳಿಗೆ | ಸೇವಾನಿರತ/ಮಾಜಿಸೈನಿಕ ಅಭ್ಯರ್ಥಿಗಳಿಗೆ |
| 100 ಮೀಟರ್ ಓಟ | 15 ಸೆಕೆಂಡಗಳಲ್ಲಿ | 20 ಸೆಕೆಂಡಗಳಲ್ಲಿ |
| 100 ಮೀಟರ್ ಓಟ ಬೆನ್ನಿನಲ್ಲಿ 22 ಕೆಜಿ ಭಾರದೊಂದಿಗೆ | 25 ಸೆಕೆಂಡಗಳಲ್ಲಿ | 32 ಸೆಕೆಂಡಗಳಲ್ಲಿ |
| 22ಕೆಜಿ ಭಾರವನ್ನು ಬೆನ್ನಿನಲ್ಲಿ ಹೊತ್ತು 20 ಅಡಿ ಎತ್ತರದವರಗೆ ಏಣಿ ಹತ್ತುವುದು. | 20 ಸೆಕೆಂಡಗಳಲ್ಲಿ | 25 ಸೆಕೆಂಡಗಳಲ್ಲಿ |
| ಗುಂಡೆಸತ(7.26 ಕಿಲೋ)(ಸಾಮಾನ್ಯ ಅಭ್ಯರ್ಥಿಗಳಿಗೆ) | ಕನಿಷ್ಠ 5.60 ಮೀಟರ್ ಮೂರು ಪ್ರಯತ್ನದಲ್ಲಿ | |
| ಗುಂಡೆಸತ(4 ಕಿಲೋ) (ಸೇವಾನಿರತ/ಮಾಜಿಸೈನಿಕ ಅಭ್ಯರ್ಥಿಗಳಿಗೆ) | | ಕನಿಷ್ಠ 3.75 ಮೀಟರ್ ಮೂರು ಪ್ರಯತ್ನದಲ್ಲಿ |
| 800 ಮೀಟರ್ ಓಟ(ಸಾಮಾನ್ಯ ಅಭ್ಯರ್ಥಿಗಳಿಗೆ) | 2 ನಿಮಿಷ 50 ಸೆಕೆಂಡಗಳಲ್ಲಿ | |
| 400 ಮೀಟರ್ ಓಟ (ಸೇವಾನಿರತ/ಮಾಜಿಸೈನಿಕ ಅಭ್ಯರ್ಥಿಗಳಿಗೆ) | | 2 ನಿಮಿಷ 50 ಸೆಕೆಂಡಗಳಲ್ಲಿ |

11.2) **<u>ಟಿಪ್ಪಣಿ:–</u>**

11.2.1) ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ಅರ್ಹಗೊಳ್ಳಲು, ಮೇಲಿನ 5 ದೈಹಿಕ ಸಾಮರ್ಥ್ಯ ಪರೀಕ್ಷೆಗಳ ಪೈಕಿ ಕನಿಷ್ಠ 3 ರಲ್ಲಿ ಉತ್ತೀರ್ಣರಾಗಬೇಕು ಹಾಗೂ ಗೈರು ಹಾಜರಾದ ಅಭ್ಯರ್ಥಿಗಳು ಅನರ್ಹಗೊಳ್ಳುವರು.

11.2.2) ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಯನ್ನು ಕೇವಲ ಅರ್ಹತೆಗಾಗಿ ನಡೆಸಲಾಗುವುದು.ಈ ಪರೀಕ್ಷೆಗೆ ಯಾವುದೇ ಅಂಕಗಳನ್ನು ನೀಡಲಾಗುವುದಿಲ್ಲ.

11.2.3)ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯಪರೀಕ್ಷೆಯನ್ನು ಬೆಂಗಳೂರಿನಲ್ಲಿ ನಡೆಸಲಾಗುವುದು.

11.2.4) ಒಂದು ವೇಳೆ ಯಾವುದೇ ತಪ್ಪು /ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಂತಹ ಅಭ್ಯರ್ಥಿಯನ್ನು ಅನರ್ಹಗೊಳಿಸಲಾಗುವುದು.

11.2.5) ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳಿಗೆ ಮಾತ್ರ ಲಿಖಿತ ಪರೀಕ್ಷೆ ನಡೆಸಲಾಗುವುದು.

11.2.6)ಅಭ್ಯರ್ಥಿಗಳಿಗೆ ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ಇಲಾಖೆಯ ವೆಬ್‌ಸೈಟ್‌ನಲ್ಲಿ ತಿಳಿಸಲಾಗುವುದು.

11.2.7)ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯಪರೀಕ್ಷೆಯನ್ನು ನಡೆಸುವಾಗ ಅಭ್ಯರ್ಥಿಗಳಿಗೆ ಉಂಟಾಗಬಹುದಾದ ಊನ, ಪೆಟ್ಟುಅಥವಾ ಯಾವುದೇ ರೀತಿಯ ಅಪಘಾತಗಳಿಗೆ ಇಲಾಖೆಯು ಜವಾಬ್ದಾರಿಯಾಗಿರುವುದಿಲ್ಲ.

**11.3)** <u>ವಿಶೇಷ ಸೂಚನೆ</u> **:–**

ದೈಹಿಕ ಸಾಮರ್ಥ್ಯಪರೀಕ್ಷೆಗೆ ಹಾಜರಾಗುವ ಮುನ್ನ ಅಭ್ಯರ್ಥಿಗಳು ದೈಹಿಕವಾಗಿ ಸದೃಢರಿರಬೇಕು.ಈ ಪರೀಕ್ಷೆಗಳಸಂದರ್ಭದಲ್ಲಿ ಸಂಭವಿಸುವ ಯಾವುದೇ ರೀತಿಯ ಅನಾಹುತ / ತೊಂದರೆಗಳಿಗೆ ಇಲಾಖೆ/ ನೇಮಕಾತಿಸಮಿತಿಯು ಜವಾಬ್ದಾರರಾಗಿರುವುದಿಲ್ಲ. ಅಭ್ಯರ್ಥಿಗಳು ಅವರ ಸ್ವಂತ ಹಿತ ದೃಷ್ಠಿಯಿಂದ ಅವರ ದೇಹದ ವೈದ್ಯಕೀಯಪರೀಕ್ಷೆಯನ್ನು ಮಾಡಿಸಿಕೊಂಡು, ಅಭ್ಯರ್ಥಿಯ ಆರೋಗ್ಯವು ಎಲ್ಲ ರೀತಿಯಿಂದಲೂ ಸದೃಢವಾಗಿದೆ ಎಂದು ಖಚಿತಪಡಿಸಿಕೊಂಡು ಇಲಾಖೆ ನಡೆಸುವ ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಎಲ್ಲಾವಿಧದಿಂದಲೂ ಅರ್ಹನೆಂದುಮುಂಚಿತವಾಗಿಯೇ ತಿಳಿದುಕೊಂಡು ಹಾಜರಾಗತಕ್ಕದ್ದು.ಈ ದಿಸೆಯಲ್ಲಿ ಕನಿಷ್ಟ ಒಂದು ತಿಂಗಳ ಮುಂಚೆಯಿಂದಲೇ ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಅಭ್ಯರ್ಥಿಗಳು ಸಾಕಷ್ಟು ಅಭ್ಯಾಸ ಮಾಡಿಕೊಳ್ಳತಕ್ಕದ್ದು.

**ಟಿಪ್ಪಣಿ :**

11.3.1) ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯಪರೀಕ್ಷೆಯನ್ನು ಒಂದು ದೈಹಿಕ ಪರೀಕ್ಷೆಯ ಸಮಿತಿಯು ನಡೆಸುತ್ತದೆ.ಯಾವುದೇ ಇತರೆ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಪರಿಗಣಿಸಲಾಗುವುದಿಲ್ಲ. ದೈಹಿಕಪರೀಕ್ಷೆಯ ಸಮಿತಿಯು ನೀಡುವ ಫಲಿತಾಂಶವೇ ಅಂತಿಮವಾಗಿರುತ್ತದೆ.

11.3.2) ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯಪರೀಕ್ಷೆ ಪೂರ್ಣಗೊಂಡ ನಂತರ ಅಭ್ಯರ್ಥಿಗಳು ದೈಹಿಕ ಪರೀಕ್ಷೆ ಸಮಿತಿಸಮ್ಮುಖದಲ್ಲಿ ನಿಗದಿತ ನಮೂನೆಗೆ ಸಹಿ ಮತ್ತು ಎಡಗೈ ಹೆಬ್ಬೆಟ್ಟಿನ ಗುರುತು ಹಾಕಬೇಕು.ಇಲ್ಲವಾದರೆಅಂತಹವರನ್ನು ಅನರ್ಹರೆಂದು ಪರಿಗಣಿಸಲಾಗುವುದು.

11.3.3) ಅಭ್ಯರ್ಥಿಗಳು ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯಪರೀಕ್ಷೆಯಲ್ಲಿ ಅರ್ಹಗೊಂಡಲ್ಲಿ ಮಾತ್ರ ಲಿಖಿತಪರೀಕ್ಷೆಗೆ ಅರ್ಹಗೊಳ್ಳುವರು.

11.3.4) ದೇಹದಾರ್ಢ್ಯತೆ ಪರೀಕ್ಷೆಯ ಎತ್ತರ ಹಾಗೂ ತೂಕವನ್ನು BMI (Body Mass Index machine)ಯಂತ್ರದಿಂದ ಪಡೆಯಲಾಗುವುದು.

11.3.5) ಪಾರದರ್ಶಕತೆಗಾಗಿ ಮೇಲೆ ಹೇಳಿದ ಎಲ್ಲಾ ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯಪರೀಕ್ಷೆಯನ್ನು ವೀಡಿಯೋಗ್ರಾಫಿಮಾಡಲಾಗುವುದು.

**12)** <u>ಲಿಖಿತ ಪರೀಕ್ಷೆ:</u>

**12.1) ಅಭ್ಯರ್ಥಿಯು ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯಪರೀಕ್ಷೆಗಳಲ್ಲಿ ಉತ್ತೀರ್ಣರಾದರೆ ಮಾತ್ರ ಲಿಖಿತ ಪರೀಕ್ಷೆಗೆಕರೆಯಲಾಗುವುದು.**

**ಪ್ರಶ್ನೆ ಪತ್ರಿಕೆ–1 ಸಾಮಾನ್ಯ ಜ್ಞಾನ (ಆಂಗ್ಲ ಅಥವಾ ಕನ್ನಡ) ಗರಿಷ್ಠ ಅಂಕಗಳು 100**

**ಪ್ರಶ್ನೆ ಪತ್ರಿಕೆ–2 ವಿಜ್ಞಾನ ಮತ್ತು ಆಪ್ಟಿಟ್ಯೂಡ್‌ಪರೀಕ್ಷೆ(Science &Aptitude Test)(ಆಂಗ್ಲ ಅಥವಾ ಕನ್ನಡ) ಗರಿಷ್ಠ ಅಂಕಗಳು 100**

**(ಪ್ರಶ್ನೆ ಪತ್ರಿಕೆ–1 ಮತ್ತು ಪ್ರಶ್ನೆ ಪತ್ರಿಕೆ–2 Objective typeಇರುವುದು ಹಾಗೂ ಪರೀಕ್ಷೆಗಳ ಕಾಲಾವಧಿ ಪ್ರತಿಯೊಂದು ಪತ್ರಿಕೆಗೆ 1 ಗಂಟೆ 30 ನಿಮಿಷಗಳು ಮಾತ್ರ)**

12.2) ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆನಿಗದಿಪಡಿಸಿರುವ ಸಮಯಕ್ಕಿಂತ ಅರ್ಧ ಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಯಲ್ಲಿ ಹಾಜರಿರತಕ್ಕದ್ದು.ಆ ಸಮಯದಲ್ಲಿ ಪರಿಕ್ಷಾ ಮೇಲ್ವಿಚಾರಕರು ಉತ್ತರ ಪತ್ರಿಕೆಯನ್ನು ಭರ್ತಿ ಮಾಡುವ ಬಗ್ಗೆ ಕೆಲವು ಮುಖ್ಯವಾದ ಮಾರ್ಗಸೂಚನೆಗಳನ್ನು ನೀಡುವರು.

12.3) ನೇಮಕಾತಿ ಸಮಿತಿಯ ನಡೆಸುವ ಯಾವುದೇ ಪರೀಕ್ಷೆಗಳಲ್ಲಿ ಅನುಚಿತವಾಗಿ ವರ್ತಿಸಿದರೆ ಅಥವಾ ನಕಲು ಮಾಡಿದ್ದು ಕಂಡುಬಂದರೆ ಅಥವಾ ನಕಲು ಮಾಡುವ ಸಾಮಗ್ರಿಗಳನ್ನು ಹೊಂದಿದ್ದರೆ ಅಂತಹ ಅಭ್ಯರ್ಥಿಗಳನ್ನು 3 ವರ್ಷಗಳ ಕಾಲ ಡಿಬಾರ್ ಮಾಡಲಾಗುವುದು.

12.4) ಪರೀಕ್ಷಾ ಕೇಂದ್ರದಲ್ಲಿ ಮೊಬೈಲ್ ಪೋನ್‌ಗಳನ್ನು ನಿಷೇಧಿಸಲಾಗಿದೆ.ಪರೀಕ್ಷೆ ಬರೆಯುವಾಗ ಅಭ್ಯರ್ಥಿಗಳು ಮೊಬೈಲ್ ಫೋನುಗಳನ್ನು ಉಪಯೋಗಿಸಿದರೆ /ಹೊಂದಿದ್ದರೆ ಅವರನ್ನು ಅನರ್ಹಗೊಳಿಸಲಾಗುತ್ತದೆ.

12.5) ಎಲೆಕ್ಟ್ರಾನಿಕ್ ಸಾಮಗ್ರಿಗಳಾದ ಪೇಜರ್, ಕ್ಯಾಲುಕಲೇಟರ್ ಇತ್ಯಾದಿಗಳನ್ನು ಪರೀಕ್ಷಾ ಕೊಠಡಿಗೆ ತೆಗೆದುಕೊಂಡು ಹೋಗುವುದನ್ನು ನಿಷೇಧಿಸಲಾಗಿದೆ.

12.6) **ದೇಹಾದಾರ್ಢ್ಯತೆ ಹಾಗೂ ದೈಹಿಕ ಸಾಮಾರ್ಥ್ಯ ಪರೀಕ್ಷೆಯಲ್ಲಿ ಉತ್ತೀರ್ಣರಾದ ಎಲ್ಲಾ ಅಭ್ಯರ್ಥಿಗಳಿಗೆ ಲಿಖಿತ ಪರೀಕ್ಷೆಯನ್ನು ಏಕಕಾಲದಲ್ಲಿ ಬೆಂಗಳೂರಿನ ಆಯ್ದ ಕೇಂದ್ರಗಳಲ್ಲಿನಡೆಸಲಾಗುವುದು.**

ಆಯ್ಕೆಸಮಿತಿಯು ಯಾವುದೇ ಪರೀಕ್ಷಾ ಕೇಂದ್ರವನ್ನು ರದ್ದುಪಡಿಸುವ ಅಥವಾ ಹೊಸದಾಗಿ ಸೇರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ. ಪರೀಕ್ಷೆಯ ದಿನಾಂಕವನ್ನು ಇಲಾಖೆಯ ವೆಬ್‌ಸೈಟ್‌ನಲ್ಲಿ ನೀಡಲಾಗುವುದು. **ಆದ್ದರಿಂದ ಅಭ್ಯರ್ಥಿಗಳು ಇಲಾಖೆಯ ವೈಬ್‌ಸೈಟ್‌ನ್ನು ದಿನ ನಿತ್ಯ ನೋಡಲು ತಿಳಿಸಲಾಗಿದೆ.**

12.7) **ಆನ್‌ಲೈನ್ ಮುಖಾಂತರ ಮಾತ್ರ ಅರ್ಜಿ ಸಲ್ಲಿಸಿರುವುದರಿಂದ ಅಭ್ಯರ್ಥಿಗಳಿಗೆ ಲಿಖಿತ ಪರೀಕ್ಷೆಯ ದಿನಾಂಕ,ಸಮಯ ಮತ್ತು ಸ್ಥಳವನ್ನು ಪ್ರತ್ಯೇಕವಾಗಿ ಅಂಚೆ ಮುಖಾಂತರ ನೀಡಲಾಗುವುದಿಲ್ಲ,**ಆದ್ದರಿಂದ ಲಿಖಿತ ಪರೀಕ್ಷೆಯಕರೆಪತ್ರವನ್ನು ಈ ಕಛೇರಿಯ ಅಧಿಕೃತ ವೆಬ್‌ಸೈಟ್ www.ksfesonline.inನಿಂದ ಅಂತರ್‌ಜಾಲದ ಮುಖಾಂತರ ಕಡ್ಡಾಯವಾಗಿ ಪಡೆದುಕೊಳ್ಳತಕ್ಕದ್ದು(Download).ಈ ಸಂಬಂಧ ಅಭ್ಯರ್ಥಿಗಳು ಮುಖ್ಯವಾಗಿ ಈ ಕಛೇರಿಯ ಅಧಿಕೃತ ವೆಬ್‌ಸೈಟ್ www.ksfesonline.inನ್ನು ದಿನನಿತ್ಯ ಮೇಲಿಂದ ಮೇಲೆ ಗಮನಿಸುತ್ತಿರುವುದು ಸೂಕ್ತ.ಕರೆಪತ್ರವನ್ನು ಪಡೆಯದೆ ಪರೀಕ್ಷೆಗೆಹಾಜರಾದಲ್ಲಿ ಅಂತಹವರಿಗೆ ಲಿಖಿತ ಪರೀಕ್ಷೆಗೆ ಅವಕಾಶ ನೀಡಲಾಗುವುದಿಲ್ಲ.

12.8) **ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ಬರುವಾಗ,ಕರೆಪತ್ರದ ಜೊತೆಗೆ ಪ್ಯಾರಾ 10.4ರಲ್ಲಿ ಹೇಳಲಾದ ಯಾವುದಾದರೊಂದು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹಾಜರುಪಡಿಸಬೇಕು.**

12.9) **ಲಿಖಿತ ಪರೀಕ್ಷೆಗೆ ತರಬೇಕಾದ ದಾಖಲೆಗಳು**

12.9.1) ಲಿಖಿತ ಪರೀಕ್ಷೆಯ ಕರೆಪತ್ರ,

12.9.2) ದೇಹದಾರ್ಢ್ಯತೆ ಪರೀಕ್ಷೆಯ ಫಲಿತಾಂಶ ಹಾಳೆ,

12.9.3) ಗುರುತಿನ ಚೀಟಿ,

12.9.4) ಆನ್‌ಲೈನ್ ಅರ್ಜಿಯ ಜೆರಾಕ್ಸ್ ಪ್ರತಿತರತಕ್ಕದ್ದು.ತಪ್ಪಿದಲ್ಲಿ ಲಿಖಿತ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡಲಾಗುವುದಿಲ್ಲ.

12.10) **ಸೂಚನೆಗಳು:**

12.10.1)

ಅ) ಪ್ರಶ್ನೆ ಪತ್ರಿಕೆ ವಸ್ತುನಿಷ್ಠ (ಆಬ್ಜೆಕ್ಟೀವ್) ಮಾದರಿಯದಾಗಿರುತ್ತದೆ.

ಆ) ಪ್ರಶ್ನೆ ಪತ್ರಿಕೆಯಲ್ಲಿನ ಪ್ರಶ್ನೆಗಳಿಗೆ ಉತ್ತರಗಳನ್ನು ಓ.ಎಂ.ಆರ್ ಶೀಟ್‌ನಲ್ಲಿ **ಕಪ್ಪು ಅಥವಾ ನೀಲಿ** ಬಣ್ಣದಬಾಲ್‌ಪಾಯಿಂಟ್ ಪೆನ್ನಿನಿಂದ ಮಾತ್ರ ಗುರುತಿಸಬೇಕಾಗುತ್ತದೆ. ನಿಗದಿತ ಜಾಗದಲ್ಲಿ ಪ್ರಶ್ನೆ ಪತ್ರಿಕೆಯ ಶ್ರೇಣಿ (ಎ,ಬಿ,ಸಿ ಇತ್ಯಾದಿ) ಹಾಗೂ ಅಭ್ಯರ್ಥಿಯು ಅರ್ಜಿ ಸಂಖ್ಯೆ, ರೋಲ್ ನಂಬರ್ ಮತ್ತುಸಹಿಯನ್ನು ತಪ್ಪದೇ ಭರ್ತಿ/ನಮೂದು ಮಾಡಬೇಕು. ಇದನ್ನು ತುಂಬದಿದ್ದರೆ ಉತ್ತರಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ ಹಾಗೂ ಅಭ್ಯರ್ಥಿ ಆಯ್ಕೆಗೆ ಅನರ್ಹರಾಗುತ್ತಾರೆ. ಆದ್ದರಿಂದ ಅಭ್ಯರ್ಥಿಯು ಸರಿಯಾಗಿ ಮೇಲಿನ ಮಾಹಿತಿ/ವಿವರಗಳನ್ನು ಕಡ್ಡಾಯವಾಗಿ ಗುರುತಿಸಬೇಕು.

ಇ) ಅಭ್ಯರ್ಥಿಗಳು ಅರ್ಜಿ ಸಂಖ್ಯೆ, ರೋಲ್ ನಂಬರ್ ಇತ್ಯಾದಿ ಭರ್ತಿ ಮಾಡಿದ ನಂತರ ನಿಗದಿತ ಜಾಗದಲ್ಲಿತಪ್ಪದೇ ಸಹಿ ಮಾಡಬೇಕು ಮತ್ತು ಎಡಗೈ ಹೆಬ್ಬೆಟ್ಟಿನ ಗುರುತು ಹಾಕಬೇಕು.

ಈ) ಅರ್ಜಿ ಸಂಖ್ಯೆ, ರೋಲ್ ನಂಬರ್ ಇತ್ಯಾದಿಗಳನ್ನು ಭರ್ತಿ ಮಾಡದೆ ಪರೀಕ್ಷೆ ಮುಗಿದ ನಂತರ ಅದನ್ನುಪರಿಗಣಿಸುವಂತೆ ಕೋರಿದಲ್ಲಿ ಅಂತಹ ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

12.10.2) ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ನಿಗದಿಪಡಿಸಿರುವ ಸಮಯಕ್ಕಿಂತ ಅರ್ಧ ಗಂಟೆ ಮುಂಚಿತವಾಗಿ ಪರೀಕ್ಷಾಕೊಠಡಿಯಲ್ಲಿ ಹಾಜರಿರತಕ್ಕದ್ದು, ಆ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಉತ್ತರ ಪತ್ರಿಕೆಯನ್ನು ಭರ್ತಿಮಾಡುವ ಬಗ್ಗೆ ಕೆಲವು ಮಾರ್ಗ ಸೂಚನೆಗಳನ್ನು ನೀಡುವರು.

12.10.3) ನೇಮಕಾತಿ ಸಮಿತಿಯು ನಡೆಸುವ ಯಾವುದೇ ಪರೀಕ್ಷೆಗಳಲ್ಲಿ ಅನುಚಿತವಾಗಿ ವರ್ತಿಸಿದರೆ ಅಥವಾ ನಕಲುಮಾಡಿದ್ದು ಕಂಡು ಬಂದರೆ ಅಥವಾ ನಕಲು ಮಾಡುವ ಸಾಮಗ್ರಿಯನ್ನು ಹೊಂದಿದ್ದರೆ, ಅಂತಹಅಭ್ಯರ್ಥಿಗಳನ್ನು 3 ವರ್ಷಗಳ ಕಾಲ ಡಿಬಾರ್ ಮಾಡಲಾಗುವುದು ಮತ್ತು ಅವರ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು.

12.10.4) ಪರೀಕ್ಷಾ ಕೇಂದ್ರದಲ್ಲಿ ಮೊಬೈಲ್ ಫೋನುಗಳನ್ನು ನಿಷೇಧಿಸಲಾಗಿದೆ.ಪರೀಕ್ಷೆ ಬರೆಯುವಾಗ ಮೊಬೈಲ್‌ಫೋನುಗಳನ್ನು ಅಭ್ಯರ್ಥಿಗಳು ಹೊಂದಿದ್ದರೆ ಅವರನ್ನು ಅನರ್ಹಗೊಳಿಸಲಾಗುತ್ತದೆ.

12.10.5) ಎಲೆಕ್ಟ್ರಾನಿಕ್ ಸಾಮಗ್ರಿಗಳಾದ ಕ್ಯಾಲ್ಕುಲೇಟರ್ ಇತ್ಯಾದಿಗಳನ್ನು ಪರೀಕ್ಷಾ ಕೊಠಡಿಗೆ ತೆಗೆದುಕೊಂಡುಹೋಗುವುದನ್ನು ನಿಷೇಧಿಸಲಾಗಿದೆ.

12.10.6) ಪ್ರಶ್ನೆ ಪತ್ರಿಕೆಯಲ್ಲಿನ ಯಾವುದಾದರು ಪ್ರಶ್ನೆಯ ಬಗ್ಗೆ ಆಕ್ಷೇಪಣೆ ಇದ್ದಲ್ಲಿ.ಪರೀಕ್ಷಾ ಕೇಂದ್ರವನ್ನು ಬಿಡುವಮೊದಲು ಆಯಾ ಪರೀಕ್ಷಾ ದಿನವೇ ಸಂಬಂಧಿತ ಪರೀಕ್ಷಾ ಮೇಲ್ವಿಚಾರಕರ ಮುಖಾಂತರ ಅಭ್ಯರ್ಥಿಯಹೆಸರು, ವಿಳಾಸ, ನೋಂದಣಿ ಸಂಖ್ಯೆ.ಇತ್ಯಾದಿಗಳನ್ನು ನಮೂದಿಸಿರುವ ಲಿಖಿತ ಮನವಿಯನ್ನು ಪರೀಕ್ಷಾಮೇಲ್ವಿಚಾರಕರಿಗೆ ಸಲ್ಲಿಸಿ ಸ್ವೀಕೃತಿ(Acknowledgement) ಪಡೆಯಬೇಕು.ಪರೀಕ್ಷಾ ಕೇಂದ್ರ ಬಿಟ್ಟ ನಂತರಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ.ಪ್ರಶ್ನೆ ಪತ್ರಿಕೆಯಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಅದನ್ನು ತಕ್ಷಣ ಮೇಲ್ವಿಚಾರಕರ ಗಮನಕ್ಕೆ ತಂದು ಅದನ್ನು ಸರಿಪಡಿಸಿಕೊಳ್ಳಬೇಕು.ಪರೀಕ್ಷೆ ಮುಗಿದ ನಂತರ ಅದರ ಬಗ್ಗೆ ನೇಮಕಾತಿ ಸಮಿತಿಯ ಗಮನಕ್ಕೆ ತಂದರೆ ಅಂತಹ ಆಕ್ಷೇಪಣೆಗಳನ್ನುಗಣನೆಗೆ ತೆಗೆದುಕೊಳ್ಳುವುದಿಲ್ಲ.

**13) ಮೌಖಿಕ ಪರೀಕ್ಷೆ:**

ಅಭ್ಯರ್ಥಿಗಳು ಲಿಖಿತ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇರೆಗೆ ಹುದ್ದೆಗಳ ವರ್ಗೀಕರಣಕ್ಕೆ ಅನುಗುಣವಾಗಿ ಒಂದು ಹುದ್ದೆಗೆ ಮೂರು ಅಭ್ಯರ್ಥಿಗಳನ್ನು ಮೌಖಿಕ ಪರೀಕ್ಷೆಗೆ 1:3 ರ ಅನುಪಾತದಲ್ಲಿ ಕರೆಯಲಾಗುವುದು.ಈ ಮೌಖಿಕ ಪರೀಕ್ಷೆ 10 ಅಂಕ ಹೊಂದಿರುತ್ತದೆ.ಅಭ್ಯರ್ಥಿಗಳು ಮೌಖಿಕ ಪರೀಕ್ಷೆಗೆ ಹಾಜರಾಗುವ ದಿನ, ಬೆಳಿಗ್ಗೆ ಪರೀಕ್ಷೆ ಪ್ರಾರಂಭವಾಗುವ ಒಂದು ಗಂಟೆ ಮೊದಲು ಮೂಲ ದಾಖಲಾತಿಗಳನ್ನು ಹಾಜರು ಪಡಿಸತಕ್ಕದ್ದು.ಒಂದು ವೇಳೆ ಹಾಜರು ಪಡಿಸದೆ ಇದ್ದಲ್ಲಿ ಅಥವಾ ಮೂಲ ದಾಖಲಾತಿಗಳಲ್ಲಿ ಯಾವುದೇ ರೀತಿಯ ವ್ಯತ್ಯಾಸಗಳು ಕಂಡುಬಂದರೆ, ಅಂತಹ ಅಭ್ಯರ್ಥಿಗಳನ್ನು ಮೌಖಿಕ ಪರೀಕ್ಷೆಗೆ ಅನರ್ಹಗೊಳಿಸಲಾಗುವುದು; ಹಾಗೂ ಮುಂದಿನ ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ. ಹಾಜರುಪಡಿಸಿದ ಮೂಲ ದಾಖಲಾತಿಗಳು ಖೋಟಾ ಅಥವಾ ತಿದ್ದಲಾದ ದಾಸ್ತಾವೇಜುಗಳೆಂದು ಕಂಡು ಬಂದರೆ ಅಂತಹ ಅಭ್ಯರ್ಥಿಯನ್ನು ಕ್ರಿಮಿನಲ್ ಮೊಕದ್ದಮೆಗಳಿಗೆ ಒಳಪಡಿಸಲಾಗುವುದು.

**14) ಆಯ್ಕೆಯ ವಿಧಾನ:**

ಲಿಖಿತ ಪರೀಕ್ಷೆ ಮತ್ತು ಮೌಖಿಕ ಪರೀಕ್ಷೆಗಳಲ್ಲಿ ಪಡೆದ ಅಂಕಗಳನ್ನು ಕ್ರೋಢೀಕರಿಸಿ ಅಂತಿಮ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನುವರ್ಗಾವರು 1:1ರ ಅನುಪಾತದಲ್ಲಿ ಪ್ರಕಟಿಸಲಾಗುವುದು.

15) **ವೈದ್ಯಕೀಯ ಪರೀಕ್ಷೆ :**

ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ ನಂತರ ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಸ್ಥಾನ ಪಡೆಯುವ ಎಲ್ಲಾಅಭ್ಯರ್ಥಿಗಳು ವೈದ್ಯಕೀಯ ಪರೀಕ್ಷೆಗೆ ನೇಮಕಾತಿ ಸಮಿತಿಯು ರಚಿಸುವ ವೈದ್ಯಕೀಯ ಮಂಡಳಿಯ ಮುಂದೆಹಾಜರಾಗತಕ್ಕದ್ದು, ಹಾಜರಾಗುವ ವೇಳೆ ಮತ್ತು ಸ್ಥಳವನ್ನು ನೇಮಕಾತಿ ಪ್ರಾಧಿಕಾರವು ನಿಗದಿಪಡಿಸುವುದು.

ವೈದ್ಯಕೀಯ ಪರೀಕ್ಷೆಗೆ ಹಾಜರಾಗುವ ಮುನ್ನ ನಿಗದಿಪಡಿಸಿದ ದಿನಾಂಕದಂದು ಅಭ್ಯರ್ಥಿಗಳು ನಿಗದಿಪಡಿಸಿದ ಸ್ಥಳದಲ್ಲಿ ಹಾಜರಾಗಿ ಮೂಲದಾಖಲಾತಿಗಳನ್ನು ಹಾಜರುಪಡಿಸುವುದು.ಮೂಲದಾಖಲಾತಿಗಳು ಹಾಜರುಪಡಿಸಿದ ನಂತರ ಅವು ಕ್ರಮಬದ್ಧವಾಗಿದ್ದಲ್ಲಿ ನಂತರ ಅಂತಹಃ ಅಭ್ಯರ್ಥಿಗಳನ್ನು ಮಾತ್ರ ವೈದ್ಯಕೀಯ ಪರೀಕ್ಷೆಗೆ ಹಾಜರುಪಡಿಸಲಾಗುವುದು.

**ವೈದ್ಯಕೀಯ ಪರೀಕ್ಷೆಗಳು ಈ ಕೆಳಕಂಡಂತಿರುತ್ತವೆ :**

**ಆಯ್ಕೆಗೊಂಡ ಅಭ್ಯರ್ಥಿಗಳು ವೈದ್ಯಕೀಯ ತಪಾಸಣೆಗಾಗಿ ಕರ್ನಾಟಕ ಅಗ್ನಿಶಾಮಕ ಸೇವಾ(ವೃಂದ ಮತ್ತು ನೇಮಕಾತಿ) ನಿಯಮಗಳು 2013 ರ ಅಪೆಂಡಿಕ್ಸ್ 'ಬ'ನಲ್ಲಿ ನಿಗದಿಪಡಿಸಿರುವ ದೈಹಿಕ ಮತ್ತು ದೃಷ್ಠಿ ಪರೀಕ್ಷೆಗಾಗಿ ವೈದ್ಯಕೀಯ**ಮಂಡಳಿಯ ಮುಂದೆ ಹಾಜರುಪಡಿಸಲಾಗುವುದು.

**ಅಪೆಂಡಿಕ್ಸ್ 'ಬ**

15.1) **PHYSICAL STANDARDS:**

15.1.1) Physique, fitness and capacity for active outdoor work.

15.1.2) The expansion for determining the acuteness of vision includes two tests one for distant and the other for near vision. Snellen's test types will be used for the test for distance of 20ft and for the test for near vision without glasses, at any distance selected by the candidate.The standards of the minimum acuteness vision which will be used for guidance in the examination of candidate are as follows:-

| **Standard- I** | **Right eye** | **Left eye** |
|---|---|---|
| Distant vision | v-6/6 | v-6/6 |
| Near vision | Reads 0.6 | Reads 0.6 |
| **Standard- II** | | |
| Distant vision | v-6/6 | v-without glasses below 6/60 and after correction with glasses not below 6/24 |
| Near vision | Reads 0.6 | Reads 1 |
| **Standard- III** | | |
| Distant vision | v-without glasses below 6/24 and after correction with glasses not below 6/6 | v-without glasses below 6/24 and after correction with glasses not below 6/12 |
| Near vision | Reads 0.8 | Reads 0.6 |

15.1.3) Each eye must have full field of vision as tested by hand movements.

15.1.4) Squint or any morbid condition of the eyes or of the liable to the risk of aggravation or recurrence,shall be deemed to be a disqualification.

15.1.5) Each eye will be examined separately and the lids must keep wide open during the test.

15.1.6) Inability to distinguish the principal colours will be a disqualification.

**15.2) ಶ್ರವಣ ಶಕ್ತಿ:**

15.2.1) ರಿನ್ನೇಸ್ ಪರೀಕ್ಷೆ (Rinne's Test)

15.2.2) ವೆಬ್ಬರ್ ಪರೀಕ್ಷೆ (Webber's Test)

15.2.3) ವೆರ್ಟಿಗೋ ಪರೀಕ್ಷೆ (Tests for Vertigo)

ಮೇಲಿನ ಪರೀಕ್ಷೆಗಳಲ್ಲಿ ಯಾವುದೇ ನ್ಯೂನತೆಗಳು ಕಂಡು ಬಂದಲ್ಲಿ ಅನರ್ಹತೆ ಎಂದು ಪರಿಗಣಿಸಲಾಗುವುದು.

**15.3)** ಈ ಕೆಳಗಿನ ದೈಹಿಕ ಪರೀಕ್ಷೆಗಳಲ್ಲಿ ಯಾವುದೇ ನ್ಯೂನತೆಗಳು ಅನರ್ಹತೆ ಎಂದುಪರಿಗಣಿಸಲಾಗುವುದು.

15.3.1) ತಾಗು ಮಂಡಿ (Knock knees)

15.3.2) ಬಾಗಿದ ಕಾಲುಗಳು (Bow legs)

15.3.3) ಚಪ್ಪಟೆ ಪಾದ (Flat feet)

15.3.4) ಅಪಧಮನಿ ಊತ (Varicose Veins)

15.3.5) ಮಾತಿನಲ್ಲಿ ಅಡಚಣೆ (Impediment in speech)

**15.4**) ಎದೆಯ ಕ್ಷ-ಕಿರಣ (Chest X-Ray)ವನ್ನು ಪರೀಕ್ಷೆಗೆ ತೆಗೆದುಕೊಳ್ಳಲಾಗುವುದು.

ಮೇಲಿನ ಎಲ್ಲಾ ಪರೀಕ್ಷೆಗಳನ್ನು ವೈದ್ಯಕೀಯ ಮಂಡಳಿಯು ನಡೆಸುತ್ತದೆ.ವೈದ್ಯಕೀಯ ಮಂಡಳಿಯು ದೈಹಿಕವಾಗಿ ಅರ್ಹರೆಂದು ಪ್ರಮಾಣೀಕರಿಸಿದ ಅಭ್ಯರ್ಥಿಗಳು ಮಾತ್ರ ನೇಮಕಾತಿಗೆ ಅರ್ಹಗೊಳ್ಳುವರು/ಅರ್ಹರಾಗುವರು.

**ಟಿಪ್ಪಣಿ :**

ದೈಹಿಕ ಸಾಮರ್ಥ್ಯ ಪರೀಕ್ಷೆ, ಲಿಖಿತ ಪರೀಕ್ಷೆ ಮತ್ತು ವೈದ್ಯಕೀಯ ಪರೀಕ್ಷೆಗಳಿಗೆ ಹಾಜರಾಗುವಅಭ್ಯರ್ಥಿಗಳಿಗೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.

16)**ಜಾತಿ ಮೀಸಲಾತಿ ಪ್ರಮಾಣ ಪತ್ರಗಳು :**

ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಕಂಡ ನಮೂನೆಗಳಲ್ಲಿ ಪ್ರಮಾಣ ಪತ್ರವನ್ನು ಅರ್ಜಿಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

16.1) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದನಮೂನೆ-ಡಿ ಪ್ರಮಾಣ ಪತ್ರ.**(ಅನುಬಂಧ-1)**

16.2) ಪ್ರವರ್ಗ-I ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದನಮೂನೆ-ಇ ಪ್ರಮಾಣ ಪತ್ರ.**(ಅನುಬಂಧ-2)**

16.3) ಪ್ರವರ್ಗ-2ಎ, 2ಬಿ, 3ಎ, 3ಬಿ ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದಪಡೆದ ನಮೂನೆ-ಎಫ್ ಪ್ರಮಾಣ ಪತ್ರ.**(ಅನುಬಂಧ-3)**

**ಸೂಚನೆ** : ನಮೂನೆ-ಎಫ್ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ:05.04.2015ಕ್ಕೆಐದು ವರ್ಷಕ್ಕಿಂತಹಳೆಯದಾಗಿರಬಾರದು.

17) **ಗ್ರಾಮೀಣ ಮೀಸಲಾತಿ:**

17.1) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು 1ನೇ ತರಗತಿಯಿಂದ 10ನೇ ತರಗತಿಯವರೆಗೆಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರಬೇಕು;

17.2) ಅಭ್ಯರ್ಥಿಯು ವ್ಯಾಸಂಗ ಮಾಡಿದ ಸ್ಥಳವು ವ್ಯಾಸಂಗ ಮಾಡಿದ ಅವಧಿಯಲ್ಲಿ ಅಂದಿನ ಕರ್ನಾಟಕ ಪೌರ ನಿಗಮಗಳ ಅಧಿನಿಯಮ 1976ರ ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆಯಹಂತದಲ್ಲಿರುವ ಪ್ರದೇಶಗಳ ಹೊರತಾಗಿ ಇತರ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ ವ್ಯಾಸಂಗಮಾಡಿದ ಅಭ್ಯರ್ಥಿಯಾಗಿರಬೇಕು;

17.3) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು ಕರ್ನಾಟಕ ಅಧಿಸೂಚನೆ ಸಂಖ್ಯೆ.ಸಿಆಸುಇ:08:ಸೆನೆನಿ:2001, ದಿನಾಂಕ 13.02.2001ರ ಪ್ರಕಾರ ಮೇಲೆ ಪರಿಭಾಷಿಸಿದಂತೆ ತರಗತಿ 1 ರಿಂದ10ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರುವವರು. ಸರ್ಕಾರಿ ಆದೇಶಸಂಖ್ಯೆ.ಸಿಆಸುಇ/96/ಸೆನೆನಿ/2005, ದಿನಾಂಕ 10.08.2005ರಲ್ಲಿ ನಿಗದಿಪಡಿಸಿದ ನಮೂನೆ-2ರ ಪ್ರಮಾಣಪತ್ರವನ್ನು ಕಡ್ಡಾಯವಾಗಿ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಮತ್ತು ವ್ಯಾಪ್ತಿಯ ಕ್ಷೇತ್ರಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿದ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದಕೊನೆಯ ದಿನಾಂಕದೊಳಗೆ ಪಡೆಯುವುದು.ನಮೂನೆ-1(ನಾನ್-ಕ್ರೀಮಿ ಲೇಯರ್) **(ಅನುಬಂಧ-4)** ಮತ್ತು ನಮೂನೆ-2**(ಅನುಬಂಧ-5)**ಇವುಗಳು ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ಅಭ್ಯರ್ಥಿಗಳಿಗೆ ಕಡ್ಡಾಯವಾಗಿರುತ್ತದೆ.

17.4) ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, ಪ್ರವರ್ಗ-2ಎ, 2ಬಿ, 3ಎ, 3ಬಿ ಸೇರಿದ ಅಭ್ಯರ್ಥಿಗಳು ನಮೂನೆ-2ರಲ್ಲಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟಪ್ರಾಧಿಕಾರದಿಂದ ಪಡೆದು ಸಲ್ಲಿಸುವುದು. **(ಅನುಬಂಧ-5)**

**ಸೂಚನೆ:**

ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, ಪ್ರವರ್ಗ-2ಎ, ಪ್ರವರ್ಗ-2ಬಿ, ಪ್ರವರ್ಗ-3ಎ, ಪ್ರವರ್ಗ-3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿಪ್ರಮಾಣ ಪತ್ರಗಳುತಿರಸ್ಕೃತಗೊಂಡಲ್ಲಿ ಅಂತಹ ಅಭ್ಯರ್ಥಿಗಳು ಮೇಲುಸ್ತರಕ್ಕೆ ಸೇರಿಲ್ಲವೆಂಬ ಪ್ರಮಾಣಪತ್ರವನ್ನು ಹೊಂದಿರದಿದ್ದಲ್ಲಿ ಅವರುಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

18) **ಯೋಜನಾ ನಿರಾಶ್ರಿತರು:**

ಯೋಜನಾ ನಿರಾಶ್ರಿತರ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ.ಡಿಪಿಎಆರ್:23:ಎಸ್‌ಆರ್‌ಆರ್:99, ದಿನಾಂಕ 23.11.2000 ರನ್ವಯ (ಈ ನಿಯಮಗಳು ಜಾರಿಯಾಗುವ 20 ವರ್ಷಕ್ಕೆ ಮುನ್ನ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳು ಈ ಮೀಸಲಾತಿಗೆ ಅನ್ವಯವಾಗುವುದಿಲ್ಲ) ಸರ್ಕಾರದ ಸುತ್ತೋಲೆಸಂಖ್ಯೆ. ಸಿಆಸುಇ:44: ಸೆನೆನಿ:2001, ದಿನಾಂಕ 27.07.2001ರಲ್ಲಿ ನಿಗದಿಪಡಿಸಿರುವ

ನಮೂನೆಯಲ್ಲಿ(**ಅನುಬಂಧ–6**) ಸಂಬಂಧಪಟ್ಟತಹಶೀಲ್ದಾರ್‌ರವರಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

19) **ಕನ್ನಡ ಮಾಧ್ಯಮ:**

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನುಕೋರುವ ಅಭ್ಯರ್ಥಿಗಳು 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಮಾಡಿಸಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. **(ಅನುಬಂಧ–7)**

20) **ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಪ್ರಮಾಣ ಪತ್ರ:**

ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸೈನಿಕಸೇವೆಯಿಂದ ಬಿಡುಗಡೆಯಾದ / ವಿಯೋಜನೆ ಹೊಂದಿದ ಬಗೆಗಿನ ಪ್ರಮಾಣ ಪತ್ರ / ನಿರಾಕ್ಷೇಪಣಾ ಪ್ರಮಾಣಪತ್ರವನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು. ಕೆ.ಸಿ.ಎಸ್.(ಸಾಮಾನ್ಯ ನೇಮಕಾತಿ) ನಿಯಮಗಳು 1977ರ, ನಿಯಮ 9(1) ರನ್ವಯ ಕೇಂದ್ರ ಸೈನ್ಯದಲ್ಲಿ ಸೇವೆ ಸಲ್ಲಿಸುವಾಗಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು(ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕಮೀಸಲಾತಿಗೆ ಅರ್ಹರಾಗಿರುತ್ತಾರೆ. ಮಾಜಿ ಸೈನಿಕ ಮಕ್ಕಳಿಗೆ ವಯೋಮಿತಿ ಸಡಿಲಿಕೆ, ದೈಹಿಕ ಸಾಮರ್ಥ್ಯ ಪರೀಕ್ಷೆಹಾಗೂ ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಯಾವುದೇ ತರಹದ ವಿನಾಯಿತಿಯನ್ನು ನೀಡಲಾಗುವುದಿಲ್ಲ.ಕರ್ತವ್ಯ ನಿರ್ವಹಿಸುತ್ತಿದ್ದ ಸೈನಿಕ ದಳದ ಅಧಿಕಾರಿಗಳಿಂದ ಅವಲಂಭಿತ ಪ್ರಮಾಣ ಪತ್ರ ಮತ್ತು ಸೈನಿಕ್ ಬೋರ್ಡ್‌ನಿಂದ ಪ್ರಮಾಣ ಪತ್ರವನ್ನು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ**ದಿನಾಂಕ:05.04.2015**ರೊಳಗಾಗಿ ಪಡೆದಿಟ್ಟುಕೊಂಡಿರತಕ್ಕದ್ದು.

21) **ಅನುಚ್ಛೇದ 371(ಜೆ)ರನ್ವಯ ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮೀಸಲಾತಿ :**

ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು 2013ಕ್ಕೆ ಸಂಬಂಧಿಸಿದಂತೆ ನೇರ ನೇಮಕಾತಿಯಲ್ಲಿ ಸ್ಥಳೀಯ ವ್ಯಕ್ತಿಯೆಂಬ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು **ಅನುಬಂಧ–8ರಲ್ಲಿ** ಸೂಚಿಸಿರುವ ನಮೂನೆಯಲ್ಲಿಯೇ ಅರ್ಹತಾ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರವಾದ ಸಂಬಂಧಪಟ್ಟ ಉಪವಿಭಾಗದ ಸಹಾಯಕ ಆಯುಕ್ತರಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ **ಕೊನೆಯ ದಿನಾಂಕದೊಳಗೆ** ಸಹಿ, ಮೊಹರು ಮತ್ತು ಜಾರಿ ಮಾಡಿದ ದಿನಾಂಕದೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು. ಇದೇ ಪ್ರಮಾಣ ಪತ್ರದ ಪ್ರತಿಯನ್ನು ದೇಹದಾರ್ಡತೆ ಹಾಗೂ ದೈಹಿಕ ಸಾಮರ್ಥ್ಯದ ಪರೀಕ್ಷೆಯ ಸಂದರ್ಭದಲ್ಲಿ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು.ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುತ್ತದೆ.ಈ ಪ್ರಮಾಣ ಪತ್ರದ ನಮೂನೆಯನ್ನು **ಅನುಬಂಧ–8** ರಲ್ಲಿ ತೋರಿಸಲಾಗಿದೆ.ಈ ನಮೂನೆಯನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಯಲ್ಲಿ ಪಡೆಯಲಾದ ಅರ್ಹತಾ ಪ್ರಮಾಣ ಪತ್ರವನ್ನು ತಿರಸ್ಕರಿಸಲಾಗುವುದು.

22) **ಪ್ರಮುಖವಾದ ಸೂಚನೆಗಳು :**

ಅಭ್ಯರ್ಥಿಗಳು ಯಾವುದೇ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸಕೂಡದು.ಆದರೆ ಈ ಕೆಳಕಂಡಪ್ರಮಾಣ ಪತ್ರಗಳನ್ನು ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆಸಿಂಧುವಾಗಿರುವಂತೆ ಪಡೆದಿಟ್ಟುಕೊಂಡಿದ್ದು, ಸಮಿತಿಯು ಸೂಚಿಸಿದಾಗ ಹಾಜರುಪಡಿಸತಕ್ಕದ್ದು.

22.1) ವಿದ್ಯಾರ್ಹತೆಯ ಅಂಕಪಟ್ಟಿ.

22.2) ಹುಟ್ಟಿದ ದಿನಾಂಕದ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪ್ರಮಾಣ ಪತ್ರ)

22.3) ಸರ್ಕಾರಿ ಇಲಾಖೆಯಲ್ಲಿ/ರಾಜ್ಯಸರ್ಕಾರದ/ಕೇಂದ್ರ ಸರ್ಕಾರದ/ಸರ್ಕಾರದ ಯಾವುದೇಪ್ರಾಧಿಕಾರದಲ್ಲಿ/ರಾಜ್ಯ ಅಥವಾ ಕೇಂದ್ರ ಸರ್ಕಾರದ ಸಾರ್ವಜನಿಕ ಸ್ವಾಮ್ಯದ ಕಂಪನಿಗಳಲ್ಲಿ ಪ್ರಸ್ತುತಉದ್ಯೋಗಿಯಾಗಿದ್ದಲ್ಲಿ ಅಂತಹವರು ಇಲಾಖಾ ವತಿಯಿಂದ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆಇಚ್ಛಾ ಅನುಮತಿ ಪತ್ರ.

22.4) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿ ಅಭ್ಯರ್ಥಿಗಳುನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್‌ರಿಂದ ಪಡೆದ ಪ್ರಮಾಣ ಪತ್ರಗಳನ್ನುಪಡೆದಿಟ್ಟುಕೊಂಡಿರತಕ್ಕದ್ದು.

22.5) ಯೋಜನಾ ನಿರಾಶ್ರಿತ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್‌ರವರಿಂದ ಪಡೆದ ಪ್ರಮಾಣ ಪತ್ರ.

22.6) ಸೈನಿಕ ಸೇವೆಯಿಂದ ಬಿಡುಗಡೆಯಾದ / ವಿಯೋಜನೆ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿಸೈನಿಕ ಮೀಸಲಾತಿ ಕೋರಿದ್ದಲ್ಲಿ).

22.7) ಮಾಜಿ ಸೈನಿಕ ಮಕ್ಕಳು ಮೀಸಲಾತಿ ಪಡೆಯುವ ಅಭ್ಯರ್ಥಿಗಳು ಅವರ ತಂದೆಯವರು ಕರ್ತವ್ಯನಿರ್ವಹಿಸುತ್ತಿದ್ದ ಸೈನ್ಯದ ಅಧಿಕಾರಿಗಳಿಂದ ಅವಲಂಭಿತ ಪ್ರಮಾಣ ಪತ್ರ ಮತ್ತು ಸೈನಿಕಬೋರ್ಡ್‌ನಿಂದ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

22.8) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿರಬೇಕು.

22.9) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲೆಯಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜುಮಾಡಿಸಿಟ್ಟು ಕೊಂಡಿರತಕ್ಕದ್ದು.

**ಟಿಪ್ಪಣಿ :**

ನಿಗದಿಪಡಿಸಿರುವ ಕೊನೆಯ ದಿನಾಂಕವಾದ 05.04.2015ಕ್ಕೆ ಮುಂಚಿತವಾಗಿ ಅಭ್ಯರ್ಥಿಗಳು ಎಲ್ಲಾ ದಾಖಲೆಗಳನ್ನು ಪಡೆದಿಟ್ಟುಕೊಂಡಿರಬೇಕು.

ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದ ನಂತರ ಮಾಡಿಸುವ ದಾಖಲಾತಿಗಳು ಹಾಗೂ ಮೀಸಲಾತಿ ಪ್ರಮಾಣ ಪತ್ರಗಳನ್ನು ಯಾವುದೇ ಹಂತದಲ್ಲಿ ಗಣನೆಗೆ ತೆಗೆದುಕೊಳ್ಳುವುದಿಲ್ಲ.

22.10) ಅಭ್ಯರ್ಥಿಯು ಅರ್ಜಿಯಲ್ಲಿ ಭರ್ತಿ ಮಾಡಿದ ಮಾಹಿತಿಯು ಅಂತಿಮವಾಗಿರುತ್ತದೆ.ಆದ್ದರಿಂದ ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವಾಗ ಅರ್ಜಿಯ ಎಲ್ಲಾ ಕಾಲಂಗಳನ್ನು ಸರಿಯಾಗಿ ಭರ್ತಿಮಾಡತಕ್ಕದ್ದು.

22.11) ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ವಿಳಾಸ ಬದಲಾವಣೆಯಾಗಿದ್ದಲ್ಲಿ ತಕ್ಷಣದಲ್ಲಿಅಭ್ಯರ್ಥಿಗಳು ಲಿಖಿತ ಮೂಲಕ ಸಂಬಂಧಪಟ್ಟ ನೇಮಕಾತಿ ಸಮಿತಿಯ ಗಮನಕ್ಕೆತರತಕ್ಕದ್ದು. ಈ ವಿಳಾಸಬದಲಾವಣೆಯನ್ನು ಪರಿಗಣಿಸಲು ನೇಮಕಾತಿ ಸಮಿತಿಯು ಪ್ರಯತ್ನಿಸುವುದು.ಆದಾಗ್ಯೂ ಈವಿಚಾರದಲ್ಲಿ ನೇಮಕಾತಿ ಸಮಿತಿಯು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ.ಈ ಬಗ್ಗೆಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.

22.12) ಅಭ್ಯರ್ಥಿಗಳು ನೇಮಕಾತಿ ಸಮಿತಿಯೊಡನೆ ಸಂಪರ್ಕಿಸಬೇಕಾದ ಸಂದರ್ಭದಲ್ಲಿ ಅವರ ಮನವಿಯೊಂದಿಗೆಅರ್ಜಿಯ ನಕಲು ಪ್ರತಿಯನ್ನು ಹಾಗೂ ಇತರೆ ಮಾಹಿತಿಯನ್ನು ನೀಡತಕ್ಕದ್ದು.

22.13) ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವಾಗ ಯಾವುದೇ ಸುಳ್ಳು/ತಪ್ಪು ಮಾಹಿತಿಗಳನ್ನು ನೀಡಬಾರದು.ಹಾಗೇ ನೀಡಿ ತದನಂತರ ನೇಮಕಾತಿ ಸಮಿತಿಗೆ ಅದು ಪತ್ತೆಯಾದಲ್ಲಿ ಅಂತಹಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದು ಪಡಿಸಲಾಗುವುದು.

23) **ವಿಶೇಷ ಸೂಚನೆಗಳು :**

ಅಭ್ಯರ್ಥಿಗಳು ನೇಮಕಾತಿ ಸಮಿತಿಯು ನಿಗದಿಪಡಿಸಿದ ಅರ್ಜಿ ನಮೂನೆಯಲ್ಲಿಯೇ ಎಲ್ಲಾ ಅಂಕಣಗಳನ್ನುಸ್ಪಷ್ಟವಾಗಿ ಭರ್ತಿ ಮಾಡತಕ್ಕದ್ದು.ಇತರೆ ಯಾವುದೇ ನಮೂನೆಗಳಲ್ಲಿ ಸಲ್ಲಿಸುವ, ಶುಲ್ಕ ಪಾವತಿಸದೆಸಲ್ಲಿಸಲ್ಪಡುವ, ಅಪೂರ್ಣವಾಗಿರುವ, ಸಹಿ ಮಾಡದ ಹಾಗೂ ಭಾವಚಿತ್ರ ಇಲ್ಲದೆ ಇರುವ ಅರ್ಜಿಗಳನ್ನುತಿರಸ್ಕರಿಸಲಾಗುವುದು ಹಾಗೂ ಈ ಕೆಳಕಂಡ ವಿಶೇಷ ಸೂಚನೆಗಳನ್ನು ಗಮನಿಸುವುದು.

23.1) ಅಭ್ಯರ್ಥಿಗಳು ಆನ್‌ಲೈನ್ ಮುಖಾಂತರ ಸಲ್ಲಿಸಿದ ಅರ್ಜಿಯ ಜೆರಾಕ್ಸ್ ಪ್ರತಿಯನ್ನು ತಮ್ಮೊಂದಿಗೆ ತಪ್ಪದೇಇಟ್ಟುಕೊಳ್ಳಲು ಸೂಚಿಸಿದೆ.

23.2) ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಕಾಲಂನ್ನುತುಂಬತಕ್ಕದ್ದು ಹಾಗೂ ಅವರ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆನಿರಾಕ್ಷೇಪಣ ಪ್ರಮಾಣ ಪತ್ರವನ್ನು (No Objection Certificate)ಸಂಬಂಧಿತ ಇಲಾಖಾಮುಖ್ಯಸ್ಥರಿಂದ ಪಡೆದಿಟ್ಟುಕೊಂಡಿದ್ದು, ನೇಮಕಾತಿ ಸಮಿತಿಯು ಸೂಚಿಸಿದಾಗ ಹಾಜರುಪಡಿಸತಕ್ಕದ್ದು.

23.3) ಅಭ್ಯರ್ಥಿಗಳು ಒಂದು ಹುದ್ದೆಗೆ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಬಾರದೆಂದು ಸಲಹೆ ನೀಡಲಾಗಿದೆ.ಅಭ್ಯರ್ಥಿಗಳು ಒಂದು ಹುದ್ದೆಗೆ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸುವ ಬದಲುಒಂದೇ ಅರ್ಜಿಯನ್ನುಅತೀ ಜಾಗರೂಕತೆಯಿಂದ ಮತ್ತು ಬಹಳ ಎಚ್ಚರಿಕೆಯಿಂದ ಭರ್ತಿ ಮಾಡತಕ್ಕದ್ದು, ಏಕೆಂದರೆ ಒಂದಕ್ಕಿಂತ ಹೆಚ್ಚುನೋಂದಣಿ ಸಂಖ್ಯೆಯಲ್ಲಿ ಪರೀಕ್ಷೆಗೆ ಹಾಜರಾಗಿದ್ದು ಯಾವುದೇ ಹಂತದಲ್ಲಿಕಂಡುಬಂದಲ್ಲಿ ಅಂತಹಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು.ಸಂಕ್ಷಿಪ್ತವಾಗಿ ತಿಳಿಸುವುದೆಂದರೆ ಒಬ್ಬ ಅಭ್ಯರ್ಥಿಯು ಒಂದುನೋಂದಣಿ ಸಂಖ್ಯೆಗಿಂತ ಹೆಚ್ಚು ನೋಂದಣಿ ಸಂಖ್ಯೆಯನ್ನು ಪರೀಕ್ಷೆಯಯಾವುದೇ ಹಂತದಲ್ಲಿಬಳಸುವುದನ್ನು ನಿಖರವಾಗಿ ನಿಷೇಧಿಸಲಾಗಿದೆ.ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚುಅರ್ಜಿಗಳನ್ನು ಒಂದೇಹೆಸರಿನಲ್ಲಿ ಸಲ್ಲಿಸಿ ಬೇರೆ ಬೇರೆ ಫೋಟೋಗಳನ್ನು ಅಂಟಿಸಿ, ಸಹಿಗಳನ್ನು ಮಾಡಿಪರೀಕ್ಷೆಗೆ ಹಾಜರಾಗಿದ್ದುಕಂಡುಬಂದಲ್ಲಿ ಅಂತಹವರ ಎಲ್ಲಾ ಅರ್ಜಿಗಳನ್ನು ತಿರಸ್ಕರಿಸುವುದಲ್ಲದೇ ಅವರಮೇಲೆ ಕಾನೂನಿನ ರೀತ್ಯಾಕ್ರಮವನ್ನು ಕೈಗೊಳ್ಳಲಾಗುವುದು.ಈ ವಿಚಾರದಲ್ಲಿ ನೇಮಕಾತಿ ಸಮಿತಿಯ ತೀರ್ಮಾನವೇಅಂತಿಮವಾಗಿರುತ್ತದೆ.

23.4) ಅರ್ಹ ಅಭ್ಯರ್ಥಿಗಳು ಮೂಲ ದಾಖಲೆಗಳ ಪರಿಶೀಲನಾ ಸಂದರ್ಭದಲ್ಲಿ ಅರ್ಜಿಯಲ್ಲಿ ನಮೂದಿಸಿರುವಎಲ್ಲಾ ಮಾಹಿತಿಗಳಿಗೆ ಪೂರಕವಾಗಿ ಸದರಿ ದಾಖಲೆ / ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ತಪ್ಪದೇ ಹಾಜರುಪಡಿಸಬೇಕು, ತಪ್ಪಿದ್ದಲ್ಲಿ ಅಂತಹ ಮೀಸಲಾತಿಯನ್ನು ರದ್ದುಪಡಿಸಿ, ಸಾಮಾನ್ಯ ವರ್ಗದಡಿಯಲ್ಲಿಅರ್ಹತೆ ಹೊಂದಿದಲ್ಲಿ ಪರಿಗಣಿಸಲಾಗುವುದು.**ಅರ್ಜಿಯೊಂದಿಗೆ ಯಾವುದೇ ಮೂಲ ಪ್ರಮಾಣಪತ್ರಗಳನ್ನು ಹಾಗೂ ಪ್ರತಿಗಳನ್ನು ಸಲ್ಲಿಸುವ ಅಗತ್ಯವಿರುವುದಿಲ್ಲ**. ಒಂದು ವೇಳೆ ಸಲ್ಲಿಸಿ, ಅವು ಕಳೆದುಹೋದರೆ ನೇಮಕಾತಿ ಸಮಿತಿಯು ಜವಾಬ್ದಾರಿಯಾಗುವುದಿಲ್ಲ.

23.5) ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಂದರೆ 05.04.2015ಕ್ಕೆ ಮೊದಲುಅಭ್ಯರ್ಥಿಗಳು ಹುದ್ದೆಗೆ ನಿಗದಿಪಡಿಸಿದ ಶೈಕ್ಷಣಿಕ ವಿದ್ಯಾರ್ಹತೆಯನ್ನು ಹೊಂದಿರಬೇಕು.

23.6) ಅಭ್ಯರ್ಥಿಗಳು ಅರ್ಜಿಯಲ್ಲಿ ತಪ್ಪು ಅಥವಾ ಸುಳ್ಳು ಮಾಹಿತಿ ನೀಡಿದ್ದಲ್ಲಿ ಅದಕ್ಕೆ ಅಭ್ಯರ್ಥಿಗಳೇ ಜವಾಬ್ದಾರರಾಗಿರುತ್ತಾರೆ. ಅರ್ಜಿಯಲ್ಲಿನ ವಿವರಗಳು ಸರಿಯಾಗಿವೆಯೇ ಎಂದು ಮನಗಂಡು ಆ ನಂತರಮೂಲ ಅರ್ಜಿಯನ್ನು ಭರ್ತಿ ಮಾಡುವುದು ಸೂಕ್ತ.

23.7) ಒಂದು ವೇಳೆ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ/ಬಂದ್‌ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನದಂದುಅರ್ಜಿಗಳನ್ನುಸ್ವೀಕರಿಸಲಾಗುವುದು. ಆದರೆ ವಯೋಮಿತಿ ಹಾಗೂ ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯ ಪರಿಗಣನೆಗೆದಿನಾಂಕ: 05.04.2015 ಮಾತ್ರ ಅನ್ವಯವಾಗುತ್ತದೆ.

23.8) ಅಭ್ಯರ್ಥಿಯು ಅರ್ಜಿಯನ್ನು ಸಮರ್ಪಕವಾಗಿ ತುಂಬದೇ ಸದರಿ ಅರ್ಜಿ ತಿರಸ್ಕೃತವಾದಲ್ಲಿ ತತ್ಸಂಬಂಧಯಾವುದೇ ರೀತಿಯ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

23.9) ಅರ್ಜಿ ತುಂಬುವ ವಿಧಾನ ಹಾಗೂ ಹೆಚ್ಚಿನ ವಿವರಗಳು ಅಗ್ನಿಶಾಮಕ ಇಲಾಖೆಯ ಅಧಿಕೃತ ವೆಬ್‌ಸೈಟ್www.ksfesonline.inನಲ್ಲಿನ ಮಾಹಿತಿ ಸೂಚಿಯಲ್ಲಿ ಲಭ್ಯವಿರುತ್ತದೆ.

23.10) ಅಭ್ಯರ್ಥಿಗಳು ತಮ್ಮ ಅರ್ಜಿಗಳಲ್ಲಿ ನೀಡುವ ಮಾಹಿತಿಗಳು ಸರಿ ಇದೆ ಎಂದು ಭಾವಿಸಿ ಅವರುಗಳುಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯಲು ಅರ್ಹರೆ ಎಂಬುದನ್ನು ಪರಿಗಣಿಸಿ ಅರ್ಹರೆಂದು ಕಂಡುಬಂದಅಭ್ಯರ್ಥಿಗಳಿಗೆ ಮಾತ್ರ ಪ್ರವೇಶ ಪತ್ರಗಳನ್ನು ತಯಾರು (Upload) ಮಾಡಲಾಗುತ್ತದೆ.ಆದ್ದರಿಂದನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದಅಥವಾ ತಪ್ಪು ಮಾಹಿತಿ ನೀಡಿದ, ಶುಲ್ಕ ಪಾವತಿಸದ, ಅಭ್ಯರ್ಥಿಯ ಸಹಿ ಇಲ್ಲದ ಮತ್ತು ಭಾವಚಿತ್ರಇಲ್ಲದೆ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

23.11) ಪರೀಕ್ಷೆಗೆ ಪ್ರವೇಶ ಪತ್ರವು ಸಂಪೂರ್ಣವಾಗಿ ತಾತ್ಕಾಲಿಕವಾಗಿರುತ್ತದೆ.ಪ್ರವೇಶ ಪತ್ರ ನೀಡಿದ ಮಾತ್ರಕ್ಕೆನೇಮಕಾತಿ ಸಮಿತಿಯು ನಿಮ್ಮ ಅಭ್ಯರ್ಥಿತನವನ್ನು ಅಂಗೀಕರಿಸಿದೆ ಎಂದು ಭಾವಿಸತಕ್ಕದ್ದಲ್ಲ.

23.12) ಪ್ರಶ್ನೆ ಪತ್ರಿಕೆಯಲ್ಲಿ ಯಾವುದಾದರೂ ಮುದ್ರಣ ದೋಷವಾಗಿದ್ದಲ್ಲಿ ಅದನ್ನು ತಕ್ಷಣ ಕೊಠಡಿಯಪರಿವೀಕ್ಷಕರ ಗಮನಕ್ಕೆ ತಂದು ಸರಿಯಾದ ಪ್ರಶ್ನೆ ಪತ್ರಿಕೆ ಪಡೆದುಕೊಂಡು ಉತ್ತರವನ್ನು ಬರೆಯಬೇಕು.ಇದರ ಬಗ್ಗೆ ಪರೀಕ್ಷೆ ಮುಗಿದ ನಂತರ ನೇಮಕಾತಿ ಸಮಿತಿಗೆ ಸದರಿ ವಿಷಯದ ಬಗ್ಗೆ ತಿಳಿಸಿದ್ದಲ್ಲಿಅದನ್ನುಗಣನೆಗೆ ತೆಗೆದುಕೊಳ್ಳುವುದಿಲ್ಲ.

23.13) ಉತ್ತರ ಪತ್ರಿಕೆಯನ್ನು ಸ್ಕ್ಯಾನಿಂಗ್ ಮಾಡಿಸಿ ಗಣಕ ಯಂತ್ರದ ಮುಖೇನ ಅರ್ಹತಾ ಪಟ್ಟಿಯನ್ನುಸಿದ್ದಪಡಿಸುವುದರಿಂದ ಅಭ್ಯರ್ಥಿಗಳು ಉತ್ತರ ಪತ್ರಿಕೆಯ ಮಾಹಿತಿಯನ್ನು ಭರ್ತಿ ಮಾಡುವ ಸಲುವಾಗಿಪರೀಕ್ಷೆಗೆ ನಿಗದಿಪಡಿಸಿರುವ ಸಮಯಕ್ಕಿಂತ ಅರ್ಧ ಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಗೆ ತಪ್ಪದೇ ಹಾಜರಾಗತಕ್ಕದ್ದು.ಆ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಕೆಲವು ಮಾರ್ಗ ಸೂಚನೆಗಳನ್ನುನೀಡುತ್ತಾರೆ.

23.14) ಪರೀಕ್ಷೆ ಮುಗಿದ ಒಂದು ಅಥವಾ ಎರಡು ದಿನಗಳ ನಂತರ ಉತ್ತರಗಳನ್ನು ತಾತ್ಕಾಲಿಕ ಕೀ ವೆಬ್‌ಸೈಟ್‌ನಲ್ಲಿ ಹಾಗೂ ಸಂಬಂಧಪಟ್ಟ ಘಟಕಗಳಲ್ಲಿ ಪ್ರಕಟಿಸಲಾಗುವುದು.ಅಭ್ಯರ್ಥಿಗಳು ಉತ್ತರಗಳ ಬಗ್ಗೆಏನಾದರೂ ಆಕ್ಷೇಪಣೆಗಳು ಇದಲ್ಲಿ ಅದಕ್ಕೆ ಒಂದು ವಾರದ ಕಾಲಾವಕಾಶವನ್ನು ನೀಡಲಾಗುವುದು.ಆಕ್ಷೇಪಣೆಗಳು ಬಂದ ನಂತರ ಅದನ್ನು ಒಂದು ತಜ್ಞರ ಸಮಿತಿಗೆ ನೀಡಿ ಅವರಿಂದ ಸರಿಯಾದಉತ್ತರಗಳನ್ನು ಪಡೆದು ಅಂತಿಮ ಕೀ ಉತ್ತರಗಳನ್ನು ಪ್ರಕಟಿಸಲಾಗುವುದು ಮತ್ತು ಈ ಅಂತಿಮ ಕೀಉತ್ತರಗಳ ಪ್ರಕಾರ ಉತ್ತರ ಪತ್ರಿಕೆಯನ್ನು ಮೌಲ್ಯಮಾಪನ ಮಾಡಲಾಗುವುದು.

23.15) ಕರ್ನಾಟಕ ರಾಜ್ಯದ, ಕೇಂದ್ರ ಸರ್ಕಾರದ ಯಾವುದೇ ಸರ್ಕಾರಿ ಹಾಗೂ ಅರೆ ಸರ್ಕಾರಿ ಸಂಸ್ಥೆಯಸೇವೆಯಿಂದ ವಜಾ ಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

23.16) ಸುಳ್ಳು ಮಾಹಿತಿ ಅಥವಾ ನಕಲಿ ಪ್ರಮಾಣ ಪತ್ರ / ದಾಖಲಾತಿಗಳನ್ನು ಸಲ್ಲಿಸಿ ನೌಕರಿಪಡೆಯುವುದು/ಪಡೆದಿರುವುದು ಯಾವುದೇ ಸಂದರ್ಭದಲ್ಲಿ ಕಂಡು ಬಂದಲ್ಲಿ, ಅದೇ ಹಂತದಲ್ಲಿಅವರನ್ನು ಯಾವುದೇ ಮುನ್ಸೂಚನೆ ನೀಡದೆ ಅವರ ಅಭ್ಯರ್ಥಿತನವನ್ನು ರದ್ದುಗೊಳಿಸುವುದರ ಜೊತೆಗೆಅವರ ವಿರುದ್ಧ ಕಾನೂನು ರೀತಿಯ ಕ್ರಮ ತೆಗೆದುಕೊಳ್ಳಲಾಗುವುದು.

23.17) ಅಭ್ಯರ್ಥಿಯು ಹುದ್ದೆಗೆ ಅರ್ಜಿ ಸಲ್ಲಿಸಿದ ತಕ್ಷಣ ತಾನು ನಿಯಮ ಮತ್ತು ವಿನಿಯಮಗಳಿಗೆ (Rules & Regulations) ಬದ್ಧನಾಗಿರುತ್ತಾನೆ ಎಂದು ಭಾವಿಸಲಾಗಿರುತ್ತದೆ.ಒಂದು ವೇಳೆ ತಾನು ಸದರಿಹುದ್ದೆಗೆ ಆಯ್ಕೆಯಾಗದ ಪಕ್ಷದಲ್ಲಿ ತದನಂತರ ಅದೇ ನಿಯಮಗಳನ್ನು ಪ್ರಶ್ನಿಸಲು ಬರುವುದಿಲ್ಲ.

23.18) ಕೆ.ಸಿ.ಎಸ್.(ಸಾಮಾನ್ಯ ನೇಮಕಾತಿ) ನಿಯಮಗಳು 1977ರಲ್ಲಿ ನಿರ್ದಿಷ್ಟಗೊಳಿಸಿರುವಂತೆ ಆಯ್ಕೆಯಾದಅಭ್ಯರ್ಥಿಯು ನೇಮಕಾತಿ ಆದೇಶ ನೀಡುವ ಮುನ್ನ ಪೂರ್ಣ ಪ್ರಮಾಣದ ವೈದ್ಯಕೀಯ ಪರೀಕ್ಷೆಗೆಒಳಗಾಗಬೇಕಾಗುತ್ತದೆ. ನಿಯಮದಲ್ಲಿ ನಿಗದಿಪಡಿಸಿರುವ ವೈದ್ಯಕೀಯ ಪರೀಕ್ಷೆಯಲ್ಲಿ ವಿಫಲರಾದಅಭ್ಯರ್ಥಿಗಳನ್ನು ಅನರ್ಹಗೊಳಿಸಲಾಗುವುದು.

24) **ದುರ್ನಡತೆ** :

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜುಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆ ಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂದು, ತಪ್ಪಿತಸ್ಥನೆಂದು ಕಂಡುಬಂದಲ್ಲಿ ಅಥವಾ ಒಂದು ಕೇಂದ್ರದಲ್ಲಿ ದೈಹಿಕ ಪರೀಕ್ಷೆಗಳಿಗೆ ಹಾಜರಾಗಿರುವ ವಿಷಯವನ್ನು ಮರೆಮಾಚಿ ಮತ್ತೊಂದು ಕೇಂದ್ರದಲ್ಲಿ ದೈಹಿಕ ಪರೀಕ್ಷೆಗೆ ಹಾಜರಾದರೆ ಹಾಗೂ ನೇಮಕಾತಿ ಸಮಿತಿಯಿಂದ ನೀಡಲಾದ ಯಾವುದೇಸೂಚನೆಗಳ್ಳು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ನೇಮಕಾತಿ ಸಮಿತಿ ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂಆಗಿ ಡಿಬಾರ್ ಮಾಡಲಾಗುವುದು.

25) **ಸಹಾಯವಾಣಿ:**

ಅಭ್ಯರ್ಥಿಗಳು ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಯ ನೇಮಕಾತಿಗೆ ಸಂಬಂಧಿಸಿದಂತೆ ಸಹಾಯವಾಣಿಗೆ ಸಂಪರ್ಕಿಸಿ ತಮ್ಮ ನೇಮಕಾತಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಸ್ಪಷ್ಟಪಡಿಸಿಕೊಳ್ಳಬಹುದು. ಘಟಕದ ಸಹಾಯವಾಣಿಯ ಸಂಖ್ಯೆಗಳು ಈ ಕೆಳಕಂಡಂತಿರುತ್ತದೆ. ಈ ಸಹಾಯವಾಣಿ ದಿನಾಂಕ: 06.03.2015 ರಿಂದ ಪ್ರತಿದಿನ ಬೆಳಿಗ್ಗೆ 8–00 ರಿಂದ ಸಾಯಂಕಾಲ 8–00 ಗಂಟೆಯವರೆಗೆ ಲಭ್ಯವಿರುತ್ತದೆ. ಅಲ್ಲದೆ ಮೇಲಿಂದ ಮೇಲೆ

ನೇಮಕಾತಿಗೆಸಂಬಂಧಪಟ್ಟಂತೆ ಬರುವ ಸಾಮಾನ್ಯ ಪ್ರಶ್ನೆಗಳಿಗೆ (Frequenty AskedQuestions–FAQ) ಉತ್ತರವನ್ನು www.ksfesonline.inಅಗ್ನಿಶಾಮಕ ಇಲಾಖೆಯ ವೆಬ್‌ಸೈಟ್‌ನಲ್ಲಿ ನೋಡಬಹುದು.

**ಸಹಾಯವಾಣಿ ಸಂಖ್ಯೆಗಳು:**

ನೇಮಕಾತಿ ಘಟಕ, ಬೆಂಗಳೂರು

080–22971605/6

ಇ–ಮೇಲ್ ವಿಳಾಸ :recruitment2015@ksfes.gov.in.

**ಸದಸ್ಯ ಕಾರ್ಯದರ್ಶಿ ಹಾಗೂ**
**ಪೊಲೀಸ್ ಮಹಾ ನಿರೀಕ್ಷಕರು ಹಾಗೂ**
**ಹೆಚ್ಚುವರಿ ಮಹಾ ನಿರ್ದೇಶಕರು**
**ಅಗ್ನಿಶಾಮಕ ಠಾಣಾಧಿಕಾರಿ ನೇಮಕಾತಿ ಸಮಿತಿ**
**ಬೆಂಗಳೂರು–560 042.**

**ಅನುಬಂಧ – ಅ.**

**ಅಗ್ನಿಶಾಮಕ ಠಾಣಾಧಿಕಾರಿಯ 65 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ.**

**1ನೇ ಸೈಕಲ್‌ನ 43 ನೇ ಬಿಂದುವಿನಿಂದ ಪ್ರಾರಂಭವಾಗಿ 1ನೇ ಸೈಕಲ್‌ನ 97ನೇ ಬಿಂದುವಿಗೆ ಕೊನೆಗೊಂಡಿದೆ. (ಉಳಿದ ಮೂಲ ವೃಂದ)**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 37 | 7 | 3 | 2 | 2 | 23 |
| ಪರಿಶಿಷ್ಟ ಜಾತಿ | 07 | 2 | – | – | – | 5 |
| ಪರಿಶಿಷ್ಟ ಪಂಗಡ | 02 | – | – | – | – | 02 |
| ಪ್ರವರ್ಗ–1 | 02 | – | – | – | – | 02 |
| ಪ್ರವರ್ಗ–2ಎ | 09 | 2 | – | – | – | 7 |
| ಪ್ರವರ್ಗ–2ಬಿ | 02 | – | – | – | – | 02 |
| ಪ್ರವರ್ಗ–3ಎ | 03 | 1 | – | – | – | 2 |
| ಪ್ರವರ್ಗ–3ಬಿ | 03 | 1 | – | – | – | 2 |
| ಒಟ್ಟು | 65 | 13 | 03 | 02 | 02 | 45 |

ಟಿಪ್ಪಣಿ: ಮಾಜಿ ಸೈನಿಕರು, ಗ್ರಾಮೀಣ, ಕನ್ನಡ ಮಾಧ್ಯಮ ಮತ್ತು ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿರುವ ಪ್ರವರ್ಗದ ಇತರರು ಅಭ್ಯರ್ಥಿಗಳಿಂದ ತುಂಬಲಾಗುವುದು.

**ಇಲಾಖಾ ಸೇವಾ ನಿರತ ಅಭ್ಯರ್ಥಿಗಳಿಗೆ ಮೀಸಲಾದ 07 ಅಗ್ನಿಶಾಮಕ ಠಾಣಾಧಿಕಾರಿ ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ.**

**1ನೇ ಸೈಕಲ್‌ನ 1 ನೇ ಬಿಂದುವಿನಿಂದ ಪ್ರಾರಂಭವಾಗಿ 1ನೇ ಸೈಕಲ್‌ನ 07ನೇ ಬಿಂದುವಿಗೆ ಕೊನೆಗೊಂಡಿದೆ. (ಉಳಿದ ಮೂಲ ವೃಂದ)**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 3 | 1 | – | – | – | 2 |
| ಪರಿಶಿಷ್ಟ ಜಾತಿ | 1 | – | – | – | – | 1 |
| ಪರಿಶಿಷ್ಟ ಪಂಗಡ | 1 | – | – | – | – | 1 |
| ಪ್ರವರ್ಗ–1 | 1 | – | – | – | – | 1 |
| ಪ್ರವರ್ಗ–2ಎ | 1 | – | – | – | – | 1 |
| ಪ್ರವರ್ಗ–2ಬಿ | – | – | – | – | – | – |

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಪ್ರವರ್ಗ–3ಎ | – | – | – | – | – | – |
| ಪ್ರವರ್ಗ–3ಬಿ | – | – | – | – | – | – |
| **ಒಟ್ಟು** | **7** | **1** | – | – | – | **6** |

ಟಿಪ್ಪಣಿ: ಮಾಜಿ ಸೈನಿಕರು, ಗ್ರಾಮೀಣ, ಕನ್ನಡ ಮಾಧ್ಯಮ ಮತ್ತು ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿರುವ ಪ್ರವರ್ಗದ ಇತರರು ಅಭ್ಯರ್ಥಿಗಳಿಂದ ತುಂಬಲಾಗುವುದು.

**ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೊಳಪಡುವ ಖಾಲಿ ಹುದ್ದೆಗಳು.**

**1ನೇ ಸೈಕಲ್‌ನ 6 ನೇ ಬಿಂದುವಿನಿಂದ ಪ್ರಾರಂಭವಾಗಿ 1ನೇ ಸೈಕಲ್‌ನ 15ನೇ ಬಿಂದುವಿಗೆ ಕೊನೆಗೊಂಡಿದೆ.ಇದರಲ್ಲಿ 03 ಹುದ್ದೆಗಳು ರಾಜ್ಯ ವ್ಯಾಪಿ ಸ್ಥಳೀಯ ವೃಂದದಲ್ಲಿ ಕೈಬಿಟ್ಟು ಹೋದ ಬಿಂದುಗಳು ಸೇರಿವೆ.**

**(ರಾಜ್ಯ ವ್ಯಾಪಿ ಸ್ಥಳೀಯ ವೃಂದ)**

**ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗೆ –13 ಖಾಲಿ ಹುದ್ದೆಗಳ ವರ್ಗೀಕರಣ ಈಕೆಳಗಿನಂತಿದೆ:**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 05 | 01 | – | – | – | 04 |
| ಪರಿಶಿಷ್ಟ ಜಾತಿ | 03 | – | – | – | – | 03 |
| ಪರಿಶಿಷ್ಟ ಪಂಗಡ | 01 | – | – | – | – | 01 |
| ಪ್ರವರ್ಗ–1 | 01 | – | – | – | – | 01 |
| ಪ್ರವರ್ಗ–2ಎ | 02 | – | – | – | – | 02 |
| ಪ್ರವರ್ಗ–2ಬಿ | 01 | – | – | – | – | 01 |
| ಪ್ರವರ್ಗ–3ಎ | – | – | – | – | – | – |
| ಪ್ರವರ್ಗ–3ಬಿ | – | – | – | – | – | – |
| ಒಟ್ಟು | 13 | 01 | – | – | – | 12 |

ಟಿಪ್ಪಣಿ: ಮಾಜಿ ಸೈನಿಕರು, ಗ್ರಾಮೀಣ, ಕನ್ನಡ ಮಾಧ್ಯಮ ಮತ್ತು ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿರುವ ಪ್ರವರ್ಗದ ಇತರರು ಅಭ್ಯರ್ಥಿಗಳಿಂದ ತುಂಬಲಾಗುವುದು.

**ಇಲಾಖಾ ಸೇವಾ ನಿರತ ಅಭ್ಯರ್ಥಿಗಳಿಗೆ ಮೀಸಲಾದ 02 ಅಗ್ನಿಶಾಮಕ ಠಾಣಾಧಿಕಾರಿ ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ.**

**1ನೇ ಸೈಕಲ್‌ನ 1 ನೇ ಬಿಂದುವಿನಿಂದ ಪ್ರಾರಂಭವಾಗಿ 1ನೇ ಸೈಕಲ್‌ನ 2ನೇ ಬಿಂದುವಿಗೆ ಕೊನೆಗೊಂಡಿದೆ.**

**(ರಾಜ್ಯ ವ್ಯಾಪಿ ಸ್ಥಳೀಯ ವೃಂದ)**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 1 | – | – | – | – | 1 |
| ಪರಿಶಿಷ್ಟ ಜಾತಿ | 1 | – | – | – | – | 1 |
| ಪರಿಶಿಷ್ಟ ಪಂಗಡ | – | – | – | – | – | – |
| ಪ್ರವರ್ಗ–1 | – | – | – | – | – | – |
| ಪ್ರವರ್ಗ–2ಎ | – | – | – | – | – | – |
| ಪ್ರವರ್ಗ–2ಬಿ | – | – | – | – | – | – |
| ಪ್ರವರ್ಗ–3ಎ | – | – | – | – | – | – |

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಪ್ರವರ್ಗ–3ಬಿ | – | – | – | – | – | – |
| ಒಟ್ಟು | 2 | – | – | – | – | 2 |

ಟಿಪ್ಪಣಿ: ಮಾಜಿ ಸೈನಿಕರು, ಗ್ರಾಮೀಣ, ಕನ್ನಡ ಮಾಧ್ಯಮ ಮತ್ತು ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿರುವ ಪ್ರವರ್ಗದ ಇತರರು ಅಭ್ಯರ್ಥಿಗಳಿಂದ ತುಂಬಲಾಗುವುದು.

**ಅನುಬಂಧ – 1**

**(ಪ.ಜಾ/ಪ.ಪಂ ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ –ಡಿ**

(ನಿಯಮ 3ಎ (2) (3) ನೋಡಿ)

**ಅನುಸೂಚಿತ ಜಾತಿ ಅಥವಾ ಅನುಸೂಚಿತ ಬುಡಕಟ್ಟುಗಳಿಗೆ (ಪ.ಜಾ /ಪ.ಪಂ) ಸೇರಿದ ಅಭ್ಯರ್ಥಿಗಳಿಗೆ ನೀಡುವ**

**ಪ್ರಮಾಣ ಪತ್ರಗಳ ನಮೂನೆ**

**ಪ್ರಮಾಣ ಪತ್ರ**

................................................................ ರಾಜ್ಯದ / ಕೇಂದ್ರಾಡಳಿತ ಪ್ರದೇಶದ * ......................................... ಜಿಲ್ಲೆಯ/ ವಿಭಾಗದ

.................................. ಗ್ರಾಮ/ಪಟ್ಟಣದ * ನಿವಾಸಿಯಾದ ಶ್ರೀ / ಶ್ರೀಮತಿ ............... ಎಂಬುವವರ ಮಗ/ಮಗಳಾದ ಶ್ರೀ /ಶ್ರೀಮತಿ .................................................. ಇವರು ಅನುಸೂಚಿತ ಜಾತಿ / ಅನುಸೂಚಿತ ಬುಡಕಟ್ಟು * ಎಂದು ಮಾನ್ಯ ಮಾಡಲಾಗಿರುವಜಾತಿ / ಬುಡಕಟ್ಟಿಗೆ * ಸೇರಿರುತ್ತಾರೆಂದು ಪ್ರಮಾಣಿಕರಿಸಲಾಗಿದೆ.

* ಸಂವಿಧಾನ (ಅನುಸೂಚಿತ ಜಾತಿಗಳು) ಆದೇಶ, 1950

* ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) ಆದೇಶ, 1950

* ಸಂವಿಧಾನ (ಅನುಸೂಚಿತ ಜಾತಿ) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1950

* ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1951

(ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಪಟ್ಟಿ (ಮಾರ್ಪಾಡು) ಆದೇಶ 1956, ಮುಂಬಯಿ ರಾಜ್ಯ ಪುನರ್ ರಚನಾ ಅದಿನಿಯಮ, 1960, ಪಂಜಾಬ್ ರಾಜ್ಯ ಪುನರ್ ರಚನಾ ಅದಿನಿಯಮ, 1966, ಹಿಮಾಚಲ ಪ್ರದೇಶ ರಾಜ್ಯ ಅದಿನಿಯಮ, 1970 ಮತ್ತು ಈಶಾನ್ಯ ಪ್ರದೇಶಗಳ (ಪುನರ್ ರಚನಾ ಅದಿನಿಯಮ, 1971ರ ಮೂಲಕ ತಿದ್ದುಪಡಿಯಾದಂತೆ).

* ಸಂವಿಧಾನ

* ಸಂವಿಧಾನ (ಜಮ್ಮು ಮತ್ತು ಕಾಶ್ಮೀರ) ಅನುಸೂಚಿತ ಜಾತಿಗಳ ಆದೇಶ, 1956

* ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ (ತಿದ್ದುಪಡಿ) ಅದಿನಿಯಮ, 1976ರ ಮೂಲಕ ತಿದ್ದುಪಡಿಯಾದಂತೆಸಂವಿದಾನ (ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳ) ಅನುಸೂಚಿತ ಬುಡಕಟ್ಟುಗಳ ಆದೇಶ, 1959.

* ಸಂವಿಧಾನ (ದಾದರ್ ಮತ್ತು ನಗರ ಹವೇಲಿ) ಅನುಸೂಚಿತ ಜಾತಿಗಳ ಆದೇಶ, 1962

* ಸಂವಿಧಾನ (ಪಾಂಡಿಚೇರಿ) ಅನುಸೂಚಿತ ಜಾತಿಗಳ ಆದೇಶ, 1964

* ಸಂವಿಧಾನ (ಅನುಸೂಚಿತ ಬುಡಕಟ್ಟುಗಳ) (ಉತ್ತರ ಪ್ರದೇಶ) ಆದೇಶ, 1967

* ಸಂವಿಧಾನ (ಗೋವಾ, ದಮನ್ ಮತ್ತು ದೀವ್) ಅನುಸೂಚಿತ ಜಾತಿ / ಬುಡಕಟ್ಟುಗಳ ಆದೇಶ 1988

* ಸಂವಿಧಾನ (ನಾಗಾಲ್ಯಾಂಡ್) ಅನುಸೂಚಿತ ಬುಡಕಟ್ಟುಗಳ ಆದೇಶ

2. ಶ್ರೀ / ಶ್ರೀಮತಿ / ಕುಮಾರಿ* ............................................................................................................ ಮತ್ತು/ಅಥವಾಅವನ* / ಅವಳ* ಕುಟುಂಬವು.......................................................................................... ರಾಜ್ಯ / ಕೇಂದ್ರಾಡಳಿತ ಪ್ರದೇಶದ............................................... ಜಿಲ್ಲಾ / ವಿಭಾಗದ ........................... ಗ್ರಾಮ / ಪಟ್ಟಣದ ಸಾಮಾನ್ಯ ನಿವಾಸಿ (ಗಳು)

ಸ್ಥಳ:

ದಿನಾಂಕ: ಸಹಿ ...................................................

ತಹಶೀಲ್ದಾರರು ...................................................

ಪದನಾಮಕಛೇರಿಯ ಮೊಹರಿನೊಂದಿಗೆ

**ರಾಜ್ಯ / ಕೇಂದ್ರಾಡಳಿತ ಪ್ರದೇಶ***

**ಅನ್ವಯವಾಗದಿರುವ ಪದಗಳನ್ನು ದಯವಿಟ್ಟು ಬಿಟ್ಟು ಬಿಡಿ / ಹೊಡೆದು ಹಾಕಿ**

ಸೂಚನೆ : ಇಲ್ಲಿ ಉಪಯೋಗಿಸಿದ **"ಸಾಮಾನ್ಯ ನಿವಾಸಿಗಳೂ"** ಎಂಬ ಪದಾವಳಿಯು ಪ್ರಜಾ ಪ್ರಾತಿನಿಧ್ಯ ಅಧಿನಿಯಮ, 1950ರ 20ನೇಪ್ರಕರಣದಲ್ಲಿರುವ ಅರ್ಥವನ್ನೇ ಹೊಂದಿರುತ್ತದೆ.

ಭಾರತ ಸರ್ಕಾರದ ಪತ್ರ ಸಂಖ್ಯೆ. ಬಿಸಿ 12028 / 2/ 76–ಎಸ್‌ಸಿಟಿ–1 ಗೃಹ ಮಂತ್ರಾಲಯದ ಅನುಸಾರವಾಗಿ, ಅಂಥ ಪ್ರಮಾಣಪತ್ರಗಳನ್ನು ನೀಡಲು ಸಕ್ಷಮವಾಗಿರುವುದಕ್ಕಾಗಿ, ಭಾರತ ಸರ್ಕಾರದ (ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ) ಪತ್ರ ಸಂಖ್ಯೆ13.02.74 ಇಎಸ್‌ಟಿ (ಎಸ್‌ಸಿಟಿ) ದಿನಾಂಕ 5ನೇ ಆಗಸ್ಟ್ 1975ರಲ್ಲಿ ನಮೂದಿಸಿದ ಪ್ರಾಧಿಕಾರಿಯು, ರಾಷ್ಟ್ರಪತಿಗಳು ಸಂಬಂಧಪಟ್ಟಆದೇಶದ ಅಧಿಸೂಚನೆಯನ್ನು ಹೊರಡಿಸಿದ ಸಮಯದಲ್ಲಿ ಪ್ರಮಾಣ ಪತ್ರಕ್ಕಾಗಿ ಅರ್ಜಿ ಸಲ್ಲಿಸಿದ ವ್ಯಕ್ತಿಯು, ತನ್ನ ಖಾಯಂ ವಾಸಸ್ಥಳವನ್ನು ಹೊಂದಿದ್ದ ಸ್ಥಳಕ್ಕೆ ಸೇರಿದವರೊಬ್ಬರಾಗಿರತಕ್ಕದ್ದು. ಅದೇ ರೀತಿಯಲ್ಲಿ, ಒಂದು ತಾಲ್ಲೂಕಿನ ರೆವಿನ್ಯೂ ಪ್ರಾಧಿಕಾರಿಯು ಇನ್ನೊಂದುತಾಲ್ಲೂಕಿಗೆ ಸೇರಿದ ವ್ಯಕ್ತಿಗಳಿಗೆ ಸಂಬಂಧಪಟ್ಟ ಪ್ರಮಾಣ ಪತ್ರವನ್ನು ನೀಡಲು ಸಕ್ಷಮ ಪ್ರಾಧಿಕಾರಿಯಾಗುವುದಿಲ್ಲ.

**ಅನುಬಂಧ – 2**

**(ಪ್ರವರ್ಗ –1ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ –ಇ**

(ನಿಯಮ 3ಎ (2) (3) ನೋಡಿ)

**ಹಿಂದುಳಿದ ವರ್ಗಗಳಿಗೆ (ಪ್ರ.ವರ್ಗ–1) ಸೇರಿದ ಅಭ್ಯರ್ಥಿಗೆ ನೀಡುವ ಪ್ರಮಾಣ ಪತ್ರ**

............................................................................................................ ಗ್ರಾಮ / ಪಟ್ಟಣದ / ನಗರ ನಿವಾಸಿಯಾದ ಶ್ರೀ /ಶ್ರೀಮತಿ ......................................................................................................... ಇವರ ಮಗ / ಮಗಳು / ಪತ್ನಿ /ಪತಿಯಾದ ಶ್ರೀ / ಶ್ರೀಮತಿ.......................................................................................... ಇವರು ಹಿಂದುಳಿದ ವರ್ಗಗಳ(ಪ್ರವರ್ಗ) ............................................................... ಜಾತಿಯ ........................................ ಉಪ ಜಾತಿಗೆ ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಶೀಲ್ದಾರರು

ದಿನಾಂಕ : ........................... ತಾಲ್ಲೂಕು

ಕಛೇರಿಯ ಮೊಹರು

**ಅನುಬಂಧ – 3**

**(ಪ್ರವರ್ಗ –2ಎ, 2ಬಿ, 3ಎ, 3ಬಿ ಗೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ –ಎಫ್**

(ನಿಯಮ 3ಎ (2) (3)ನ್ನು ನೋಡಿ)

**ಹಿಂದುಳಿದ ವರ್ಗಗಳಿಗೆ (2ಎ, 2ಬಿ, 3ಎ, 3ಬಿ) ಸೇರಿದ ಅಭ್ಯರ್ಥಿಗಳಿಗೆ ನೀಡುವ ಆದಾಯ ಮತ್ತು**

**ಜಾತಿ ಪ್ರಮಾಣ ಪತ್ರ**

................................................................. ರಲ್ಲಿ ವಾಸವಾಗಿರುವ ಶ್ರೀ / ಶ್ರೀಮತಿ ................................................. ಇವರ ಮಗ /ಮಗಳು / ಪತಿ / ಪತ್ನಿಯಾದ ಶ್ರೀ/ಶ್ರೀಮತಿ/ಕುಮಾರಿ ....................................... ಇವರು ಮತ್ತು ಆತನ / ಅವಳ ತಂದೆ / ತಾಯಿ /ಪೋಷಕರು/ಪತ್ನಿ/ಪತಿಯು, ಸರ್ಕಾರಿ ಆದೇಶಗಳ ಸಂಖ್ಯೆ, ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ 30.03.2002ರಲ್ಲಿ ನಿರ್ದಿಷ್ಟ ಪಡಿಸಿದ ಮೇಲುಸ್ತರದ (ಕ್ರಿಮಿ ಲೇಯರ್) ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು ;

ಅಭ್ಯರ್ಥಿಯಾಗಲಿ ಅಥವಾ ಆತನ / ಆಕೆಯ ತಂದೆ ತಾಯಿ/ಪೋಷಕರಾಗಲಿ· / ಪತ್ನಿ / ಪತಿಯಾಗಲಿ, ಸರ್ಕಾರದ ಸೇವೆಯಲ್ಲಿ 1ನೇದರ್ಜೆಯ ಅಥವಾ 2ನೇ ದರ್ಜೆಯ ಅದಿಕಾರಿಯಾಗಿಲ್ಲವೆಂದು ;

ಅಥವಾ

ಸಾರ್ವಜನಿಕ ವಲಯ ಉದ್ಯಮದಲ್ಲಿ ತತ್ಸಮಾನವಾದ ಹುದ್ದೆಯನ್ನು ಹೊಂದಿರುವುದಿಲ್ಲ ;

ಅಥವಾ

ಖಾಸಗಿ ನಿಯೋಜಕರ ಕೈಕೆಳಗೆ, 2ನೇ ದರ್ಜೆಯ ಅದಿಕಾರಿಯ ಸಂಬಳಕ್ಕಿಂತ (ವೇತನ ಶ್ರೇಣಿ `.6000–12000/– ಪ್ರಾರಂಬಿಕ ಹಂತ)ಕಡಿಮೆಯಲ್ಲದ ಸಂಬಳವನ್ನು ಪಡೆಯುವ ನೌಕರನಾಗಿಲ್ಲವೆಂದು

ಅಥವಾ

ಆತನ/ಆಕೆಯ ತಂದೆ ತಾಯಿ//ಪೋಷಕರು / ಪತ್ನಿ /ಪತಿಯ ಆದಾಯವು ಎರಡು ಲಕ್ಷ ಮೀರುವುದಿಲ್ಲವೆಂದು ;

ಅಥವಾ

ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರಲ್ಲಿ ನಿಗದಿಪಡಿಸಿರುವಂತೆ ಆತನ/ಆಕೆಯ ತಂದೆ ತಾಯಿ/ಪೋಷಕರು / ಪತ್ನಿ /ಪತಿಯು ಮಾರಾಟ ತೆರಿಗೆದಾರನಲ್ಲ ಅಥವಾ ಆತನ/ಆಕೆಯ ತಂದೆ ತಾಯಿ/ಪತ್ನಿ/ಪತಿಯು ಅಥವಾ ಇವರಿಬ್ಬರೂ 10 ಯುನಿಟ್‌ಗಿಂತ ಹೆಚ್ಚಿನ ಕೃಷಿ ಭೂಮಿ ಅಥವಾ 25 ಎಕರೆಗಳಿಗಿಂತ ಹೆಚ್ಚಿನ ಪ್ಲಾಂಟೇಶನ್ ಭೂಮಿಯನ್ನು ಹೊಂದಿರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ. ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ 30.03.2002ರ ಅನ್ವಯ ಶ್ರೀ/ಶ್ರೀಮತಿ/ಕುಮಾರಿ.................

................................................. ಇವರು ........................................... ಜಾತಿಗೆ ........................................ ಸೇರಿದ ಉಪಜಾತಿಯವರಾಗಿದ್ದು ಸರ್ಕಾರಿ ಆದೇಶ ಸಂಖ್ಯೆ. ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ 30.03.2002ರ ಅನ್ವಯ ಹಿಂದುಳಿದ ವರ್ಗಗಳ ಪ್ರವರ್ಗ................................ (2ಎ, 2ಬಿ, 3ಎ, 3ಬಿ) ಸೇರಿರುತ್ತಾರೆ.

ಸ್ಥಳ : ತಹಶೀಲ್ದಾರರು

ದಿನಾಂಕ : ............................ ತಾಲ್ಲೂಕು

ಕಛೇರಿಯ ಮೊಹರು

**ಅನುಬಂಧ – 4**

**ನಮೂನೆ–1**

**ಜನರಲ್ ಮೆರಿಟ್ ಅಭ್ಯರ್ಥಿಗಳು ಮೇಲುಸ್ತರಕ್ಕೆ ಸೇರಿಲ್ಲವೆಂದು, ದೃಢೀಕರಿಸಿ ಗ್ರಾಮೀಣ ಮೀಸಲಾತಿಯನ್ನು ಕೋರಲು ಸಲ್ಲಿಸಬೇಕಾದ ಪ್ರಮಾಣ ಪತ್ರ**

(ಜನರಲ್ ಮೆರಿಟ್ ಅಭ್ಯರ್ಥಿಗಳು ಭರ್ತಿ ಮಾಡಬೇಕಾದ ನಮೂನೆ)

ಇವರಿಗೆ:

ತಹಶೀಲ್ದಾರರು,

..................... ತಾಲ್ಲೂಕು,

..................... ಜಿಲ್ಲೆ.

ಮಾನ್ಯರೆ,

ಶ್ರೀ / ಶ್ರೀಮತಿ ...................................................... ಎಂಬುವವರ ಮಗ/ಮಗಳು/ಪತಿ/ಪತ್ನಿ....................................... ಆದ ನಾನು ಮೇಲುಸ್ತರದಲ್ಲಿ (Creamy Layer) ಬರುವುದಿಲ್ಲವೆಂದು ನೇರ ನೇಮಕಾತಿಯಲ್ಲಿ ಗ್ರಾಮೀಣ ಅಭ್ಯರ್ಥಿ ಮೀಸಲಾತಿಯನ್ನು ಪಡೆಯುವುದಕ್ಕಾಗಿ ಪ್ರಮಾಣ ಪತ್ರವನ್ನು ಪಡೆಯಲು ತಮ್ಮಲ್ಲಿ ಈ ಕೆಳಕಂಡ ಮಾಹಿತಿಗಳನ್ನು ಒದಗಿಸುತ್ತಾ ಕೋರುತ್ತೇನೆ.

1. ಅಭ್ಯರ್ಥಿಯ ಹೆಸರು ಮತ್ತು ಉದ್ಯೋಗ :
2. ಅಭ್ಯರ್ಥಿಯ ಸ್ವಂತ ಸ್ಥಳ ಗ್ರಾಮ :
   ತಾಲ್ಲೂಕು :
   ಜಿಲ್ಲೆ :
3. ಅಭ್ಯರ್ಥಿಯು ಹುಟ್ಟಿದ ದಿನಾಂಕ ವಯಸ್ಸು ಮತ್ತು ಹುಟ್ಟಿದ ಸ್ಥಳ :
4. ಅಭ್ಯರ್ಥಿಯ ತಂದೆ/ತಾಯಿ/ಪೋಷಕರ ಪತಿಯ/ಪತ್ನಿಯ ಹೆಸರು ಮತ್ತು ಉದ್ಯೋಗ:
   (ಉದ್ಯೋಗವು ಸರ್ಕಾರಿ/ಅರೆ ಸರ್ಕಾರಿ/ಸಾರ್ವಜನಿಕ ಉದ್ಯಮ/ಖಾಸಗಿ)
5. ಅಭ್ಯರ್ಥಿಯ ಪ್ರಸ್ತುತ ವಿಳಾಸ :
   (ಸಂಕ್ಷಿಪ್ತವಾಗಿ ನಮೂದಿಸುವುದು)
6. ಅಭ್ಯರ್ಥಿಯ ಖಾಯಂ ವಿಳಾಸ :
7. ಅಭ್ಯರ್ಥಿಯ ಶಾಲಾ ಶಿಕ್ಷಣದ ವ್ಯಾಸಂಗ ಮಾಡಿದ ಶಾಲೆಗಳ ವಿವರಗಳು
   - ಪ್ರಾಥಮಿಕ
   - ಮಾಧ್ಯಮಿಕ
   - ಪ್ರೌಢ
8. ಅಭ್ಯರ್ಥಿಯ ಹಾಗೂ ಅಭ್ಯರ್ಥಿಯ ತಂದೆ/ತಾಯಿ/ಪೋಷಕರ (ತಂದೆ/ತಾಯಿ ಜೀವಂತವಿಲ್ಲದಿದ್ದರೆ) ಇವರ ಒಟ್ಟು ವಾರ್ಷಿಕಆದಾಯ ಎಲ್ಲಾ ಮೂಲಗಳಿಂದ :
   1) ವೇತನ ಶ್ರೇಣಿ
   2) ಜಮೀನಿನ ವಿವರ
   3) ಇತರ ಮೂಲಗಳು

9. ಆದಾಯ ತೆರಿಗೆ ಪಾವತಿದಾರರೇ ?

10. ಸಂಪತ್ತು ತೆರಿಗೆ ಪಾವತಿದಾರರೇ ?

11. ಮಾರಾಟ ತೆರಿಗೆ ಪಾವತಿದಾರರೇ ?

**ಪ್ರಮಾಣೀಕೃತ ಘೋಷಣೆ**

ಈ ಮೇಲೆ ನನ್ನಿಂದ ಒದಗಿಸಿದ ಮಾಹಿತಿ/ವಿವರಣೆಯು ನಾನು ತಿಳಿದಿರುವಷ್ಟರ ಮಟ್ಟಿಗೆ ಸತ್ಯವೆಂದು ಶ್ರದ್ಧಾಪೂರ್ವಕವಾಗಿ ದೃಢೀಕರಿಸುತ್ತೇನೆ ಮತ್ತು ಘೋಷಿಸುತ್ತೇನೆ.

ಸ್ಥಳ : ತಮ್ಮ ವಿಧೇಯ

ದಿನಾಂಕ : (ಅಭ್ಯರ್ಥಿಯ ಸಹಿ)

ಮೇಲೆ ಒದಗಿಸಲಾದ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತಾ ಈ ಮಾಹಿತಿಗಳು ಅಸತ್ಯವೆಂದು ದೃಢಪಟ್ಟಲ್ಲಿ ಅಪರಾಧ ವಿಚಾರಣೆಗೆ ಬದ್ಧನಾಗಿರುತ್ತೇನೆ.

ಸ್ಥಳ : ತಂದೆ/ತಾಯಿ/ಪೋಷಕರ ಸಹಿ

ದಿನಾಂಕ : (ತಂದೆ/ತಾಯಿ ಜೀವಂತವಿಲ್ಲದಿದ್ದರೆ)

(ಹೆಂಡತಿ/ಗಂಡ/ಇವರ ಸಹಿ)

**ಸ್ಥಳೀಯ ಇಬ್ಬರು ಸಾಕ್ಷಿದಾರರು**

ಅಭ್ಯರ್ಥಿಯ ಮತ್ತು ಅವರ ತಂದೆ/ತಾಯಿ/ಪೋಷಕರು/ಪತಿ/ಪತ್ನಿ ಇವರನ್ನು ಹಾಗೂ ಇವರ ಸಹಿಯನ್ನು ಗುರುತಿಸುತ್ತೇವೆ.

ಸಾಕ್ಷಿದಾರರ ಸಹಿ 1)

(ಪೂರ್ಣ ವಿಳಾಸದೊಂದಿಗೆ) 2)

**ಪರಿಶೀಲನಾ ಪ್ರಮಾಣ ಪತ್ರ**

1. ಶ್ರೀ/ಶ್ರೀಮತಿ..................................ಎಂಬುವವರ ಮಗ/ಮಗಳು/ಪತಿ/ಪತ್ನಿ/ಶ್ರೀ/ಶ್ರೀಮತಿ/ಕುಮಾರಿ............................................ ಎಂಬುವವರು ಕರ್ನಾಟಕ ರಾಜ್ಯದ ......................................... ಜಿಲ್ಲೆಯ ವಿಭಾಗ................................. ಗ್ರಾಮ/ಪಟ್ಟಣ/ನಗರದಲ್ಲಿ ಸಾಮಾನ್ಯ ನಿವಾಸಿಯಾಗಿದ್ದಾರೆ ಮತ್ತು ಇವರು ಜನರಲ್ ಮೆರಿಟ್ ವರ್ಗಕ್ಕೆ ಸೇರಿದವರಾಗಿರುತ್ತಾರೆ.

2. ಶ್ರೀ/ಶ್ರೀಮತಿ/ಕುಮಾರಿ ......................................................... ಇವರ ತಂದೆ/ತಾಯಿ/ಪೋಷಕರು ಸರ್ಕಾರಿ ಆದೇಶ ಸಂಖ್ಯೆಎಸ್‌ಡಬ್ಲ್ಯೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ 31.01.1995 ರನ್ವಯ ಜನರಲ್ ಮೆರಿಟ್ ವರ್ಗದ ಮೇಲುಸ್ತರದಲ್ಲಿ (CreamyLayer) ಬರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಶೀಲ್ದಾರರು

ದಿನಾಂಕ : ......................... ತಾಲ್ಲೂಕು

ಕಛೇರಿಯ ಮೊಹರು

**ಸೂಚನೆ–1**: ಇದರಲ್ಲಿ ಉಪಯೋಗಿಸಲಾದ **"ಸಾಮಾನ್ಯ ನಿವಾಸಿ"** ಎಂಬ ಪದವು 1950ರ ಜನತಾ ಪ್ರಾತಿನಿಧ್ಯ ಕಾಯ್ದೆಯ 20ನೇಅನುಚ್ಛೇದದಲ್ಲಿನ ಅರ್ಥವನ್ನು ಹೊಂದಿರುತ್ತದೆ.

**ಸೂಚನೆ–2**: ಪರಿಶೀಲನಾ ಪ್ರಮಾಣ ಪತ್ರ ನೀಡುವ ಅದಿಕೃತ ಅದಿಕಾರಿಯು ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 251 ಬಿಸಿಎ 94,ಬೆಂಗಳೂರು, ದಿನಾಂಕ 31.01.1995 ರನ್ವಯ ಮೇಲುಸ್ತರ (Creamy Layer) ದವರನ್ನು ಗುರುತಿಸಲು ನಿಗದಿಪಡಿಸಲಾಗಿರುವಅಂಶಗಳನ್ನು ವಿವರವಾಗಿ ಖಚಿತಪಡಿಸಿಕೊಂಡ ನಂತರವೇ ಪ್ರಮಾಣ ಪತ್ರ ನೀಡತಕ್ಕದ್ದು.

**ಅನುಬಂಧ –5**

**ನಮೂನೆ –2**

**ಗ್ರಾಮೀಣ ಅಭ್ಯರ್ಥಿ ಪ್ರಮಾಣ ಪತ್ರ**

ಶ್ರೀ/ಶ್ರೀಮತಿ...................................................................................ರವರಮಗ/ಮಗಳು/ಪತ್ನಿ/ಶ್ರೀ/ಶ್ರೀಮತಿ/ಕುಮಾರಿ.................................... ಜಿಲ್ಲೆ ............................. ತಾಲ್ಲೂಕು .............................. ಗ್ರಾಮದಲ್ಲಿ ..........................ವಾಸವಾಗಿರುವ ಇವರು ಒಂದನೇ ತರಗತಿಯಿಂದ ................................ ತರಗತಿಯವರೆಗೆ ....................................... ಜಿಲ್ಲೆ................................. ತಾಲ್ಲೂಕು ............................... ಪಟ್ಟಣ ............................................... ಶಾಲೆಯಲ್ಲಿ ವ್ಯಾಸಂಗ ಮಾಡಿ................................ ವರ್ಷ ನಡೆದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಈ ಶಾಲೆಯು

ಅಭ್ಯರ್ಥಿಯು ವ್ಯಾಸಂಗ ಮಾಡಿದಅವದಿಯಲ್ಲಿ ಕರ್ನಾಟಕದ ಪೌರ ನಿಗಮಗಳ ಅಧಿನಿಯಮ, 1976 ಅಥವಾ ಕರ್ನಾಟಕ ಪೌರ ಸಭೆಗಳ ಅದಿನಿಯಮ, 1964ರ ಅಡಿಯಲ್ಲಿನಿರ್ದಿಷ್ಟ ಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶಗಳ ಹೊರತಾದ ಪ್ರದೇಶದಲ್ಲಿತ್ತು.

ಸ್ಥಳ : ಮುಖ್ಯೋಪಾಧ್ಯಾಯರ ಸಹಿ

ದಿನಾಂಕ : ಮತ್ತು ಸಂಸ್ಥೆಯ ಪೂರ್ಣ ವಿಳಾಸವುಳ್ಳ ಮೊಹರು

ಮೇಲುರುಜು

ಕ್ಷೇತ್ರ ಶಿಕ್ಷಣಾದಿಕಾರಿ

**ಅನುಬಂಧ – 6**

ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 44 ಸೇನೆನಿ 2001 ದಿನಾಂಕ 27–07–2001

**ನಮೂನೆ–3**

**ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿ**

ಶ್ರೀ/ಶ್ರೀಮತಿ ...................................................................................... ಎಂಬುವವರ ಮಗ/ಮಗಳು/ಪತ್ನಿ/ಶ್ರೀಮತಿ/ ಕುಮಾರಿ.................................................. ಜಿಲ್ಲೆ ............................. ತಾಲ್ಲೂಕು ............................. ಗ್ರಾಮದಲ್ಲಿ ವಾಸವಾಗಿರುವ ಇವರು:ಇವರ ಕುಟುಂಬದವರ ಅವಲಂಬಿತರಾಗಿದ್ದ ಈ ಕೆಳಕಂಡ ಆಸ್ತಿಯನ್ನು .......................................................... ಯೋಜನೆಗಾಗಿ.............................. ಇಸವಿಯಂದು ಸ್ವಾದೀನಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸಿದೆ :–

(i) ** ವಾಸಿಸುವ ಮನೆ ಮತ್ತು ತಾವು ಅವಲಂಬಿತರಾಗಿದ್ದ ಅವರ ಕೃಷಿ ಭೂಮಿಯ ಅರ್ಧದಷ್ಟು.

(ii) ** ಯೋಜನೆಗೆ ಮೊದಲು ಭೂಮಿಯನ್ನು ಹೊಂದಿರದೆ : ಯೋಜನೆಯಿಂದ ತಾವು ವಾಸಿಸುವ ಮನೆ :

(iii) ** ತಾವು ಅವಲಂಬಿತರಾಗಿದ್ದ ತಮ್ಮ ಕೃಷಿ ಭೂಮಿಯ ಅರ್ಧದಷ್ಟು ಅಥವಾ ಅದಕ್ಕಿಂತ ಕಡಿಮೆ ಕೃಷಿ ಭೂಮಿ :

(iv) ** ಇತರ ಇನ್ನಾವುದೇ ಪ್ರಕರಣದಲ್ಲಿ ಯೋಜನೆಯಿಂದ ನಿರ್ವಸಿತರಾದವರು.

ಸ್ಥಳ : ಸಹಿ/–

ತಹಶೀಲ್ದಾರರು

ದಿನಾಂಕ : ...................... ತಾಲ್ಲೂಕು,

ಕಛೇರಿಯ ಮೊಹರು

(** ಅನ್ವಯವಾಗುವ ಐಟಂನ್ನು ಮಾತ್ರ ಪ್ರಮಾಣ ಪತ್ರದಲ್ಲಿ ನಮೂದಿಸತಕ್ಕದ್ದು.)

~ ~ ~ ~

**ಅನುಬಂಧ – 7**

**ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ**

ಶ್ರೀ / ಶ್ರೀಮತಿ .......................................................................................... ರವರ ಮಗ/ಮಗಳು/ಪತ್ನಿ/ಶ್ರೀಮತಿ/ ಕುಮಾರಿ

............................................. ಜಿಲ್ಲೆ ............................ ತಾಲ್ಲೂಕು .............................. ಗ್ರಾಮದಲ್ಲಿ ...............................

ವಾಸವಾಗಿರುವ ಇವರು .................................. ನೇ ತರಗತಿಯಿಂದ ...................................................... ನೇ ತರಗತಿಯವರೆಗೆ

.............................. ಶೈಕ್ಷಣಿಕ ವರ್ಷದಿಂದ.............................. ಶೈಕ್ಷಣಿಕ ವರ್ಷದವರೆಗೆ.............................. ಶಾಲೆಯಲ್ಲಿ ಕನ್ನಡಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ಮುಖ್ಯೋಪಾಧ್ಯಾಯರ ಸಹಿ

ದಿನಾಂಕ : ಮತ್ತು ಸಂಸ್ಥೆಯ ಪೂರ್ಣ ವಿಳಾಸವುಳ್ಳ ಮೊಹರು

ಮೇಲು ರುಜು

ಕ್ಷೇತ್ರ ಶಿಕ್ಷಣಾದಿಕಾರಿ, ಕಛೇರಿಯ ಮೊಹರು

**ಅನುಬಂಧ – 8**

**ಹೈದರಾಬಾದ್–ಕರ್ನಾಟಕ ಮೀಸಲಾತಿ ಬಯಸಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಿಗೆ ಪ್ರಮಾಣ ಪತ್ರ:**

**ಅನುಬಂಧ –ಎ**

**ಅರ್ಹತಾ ಪ್ರಮಾಣ ಪತ್ರ**

[ಅನುಚ್ಛೇದ 371 (ಜೆ) ಮೇರೆಗೆ]

(3(3)ನೇ ನಿಯಮ ನೋಡಿ)

[ಪ್ರಮಾಣ ಪತ್ರ ನೀಡಲು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್ –ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿಮೀಸಲಾತಿ) ನಿಯಮಗಳು, 2013]

ಶ್ರೀ / ಶ್ರೀಮತಿ ------------------ ರವರು -------------------- ರವರ ಮಗ/ಹೆಂಡತಿಯಾಗಿದ್ದು,ಇವರು ಕರ್ನಾಟಕ ರಾಜ್ಯದ ----- ------------ ಜಿಲ್ಲೆಯ ----------------- ತಾಲ್ಲೂಕಿನ ------------------ ಗ್ರಾಮ / ಪಟ್ಟಣದ ಸ್ಥಳೀಯ ವ್ಯಕ್ತಿಯಾಗಿದ್ದಾರೆ.

ಸ್ಥಳ: --------------------- ಹೆಸರು --------------------

ದಿನಾಂಕ: ------------------ ಅಸಿಸ್ಟೆಂಟ್ ಕಮಿಷ್ನರ್

-----------ಉಪವಿಭಾಗ

-----------------ಜಿಲ್ಲೆ

= = = = = = =

**ಸದಸ್ಯ ಕಾರ್ಯದರ್ಶಿ ಹಾಗೂ**

**ಪೊಲೀಸ್ ಮಹಾ ನಿರೀಕ್ಷಕರು ಹಾಗೂ**

**ಹೆಚ್ಚುವರಿ ಮಹಾ ನಿರ್ದೇಶಕರು**

**ಅಗ್ನಿಶಾಮಕ ಠಾಣಾಧಿಕಾರಿ ನೇಮಕಾತಿ ಸಮಿತಿ**

**ಬೆಂಗಳೂರು–560 042.**

**ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗಳ ನೇಮಕಾತಿ–2015**

**ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗೆ ಆನ್–ಲೈನ್ ಮುಖಾಂತರ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಿಗೆ ಸೂಚನೆಗಳು.**

1) ಅರ್ಜಿಗಳನ್ನು ಆನ್–ಲೈನ್ (On-line) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸಲು ಅವಕಾಶವಿರುತ್ತದೆ.
2) ಅರ್ಜಿದಾರರು ಹೊಸ ಅರ್ಜಿಯನ್ನು ಸಲ್ಲಿಸುವ ಮೊದಲು ಅಂತರ್‌ಜಾಲದಲ್ಲಿ ಹೊಸದಾಗಿ BROWSER ನ್ನು ತೆರೆದು ಅರ್ಜಿಯನ್ನು ತುಂಬಬೇಕು. ಅರ್ಜಿಯನ್ನು ಪೂರ್ಣಗೊಳಿಸಿದ ನಂತರತೆರೆದಿರುವ BROWSERನ್ನು ಮುಕ್ತಾಯಗೊಳಿಸಬೇಕು. ಉದಾಹರಣೆ: ಇತರರು ತೆರೆದಿರುವಅಥವಾ ಅರ್ಜಿಯನ್ನು ಸಲ್ಲಿಸಿ BROWSER ನ್ನು ಮುಕ್ತಾಯ ಮಾಡದೆ ಹೋಗಿರುವ BROWSERನಲ್ಲಿ ಅರ್ಜಿದಾರರು ಹೊಸ ಅರ್ಜಿಯನ್ನು ಸಲ್ಲಿಸದಂತೆ ಸೂಚಿಸಲಾಗಿದೆ.

**ಆನ್‌ಲೈನ್ (On-line) ಮುಖಾಂತರ ಅರ್ಜಿ ಸಲ್ಲಿಸುವ ಹಾಗೂ ಶುಲ್ಕ ಪಾವತಿಸುವ ವಿಧಾನ :**

ಅರ್ಜಿದಾರ ಇಲಾಖೆಯ ಅಧಿಕೃತ ವೆಬ್‌ಸೈಟ್ www.ksfesonline.inನಲ್ಲಿ ನೀಡಲಾಗಿರುವಅಧಿಸೂಚನೆ, ಮಾಹಿತಿಸೂಚಿ ಮತ್ತು ಸೂಚನೆಗಳನ್ನು ಜಾಗರೂಕತೆಯಿಂದ ಓದಿಕೊಂಡುಅರ್ಜಿಯನ್ನು ಭರ್ತಿಮಾಡಬೇಕು.ಅರ್ಜಿದಾರ ಒಂದು ಬಿಳಿ ಹಾಳೆಯ ಮೇಲೆ ಪಾಸ್‌ಪೋರ್ಟ್ ಅಳತೆಯ ಬಣ್ಣದಭಾವಚಿತ್ರವನ್ನು ಮತ್ತು ಸಹಿಯನ್ನು ಪ್ರತ್ಯೇಕವಾಗಿ (Soft Copy - less than 250 KB)ಸ್ಕ್ಯಾನ್ ಮಾಡಿಟ್ಟುಕೊಂಡಿರಬೇಕು.ನಂತರ ಅರ್ಜಿದಾರರ ಹೆಸರು, ಜಾತಿ, ಮೀಸಲಾತಿಗಳ ವಿವರ,ಹುಟ್ಟಿದ ದಿನಾಂಕ ಮತ್ತು ಇತ್ಯಾದಿ ವಿವರಗಳನ್ನು ಭರ್ತಿ ಮಾಡಿ ಕೊನೆಯದಾಗಿ ಸ್ಕ್ಯಾನ್‌ಮಾಡಿಟ್ಟುಕೊಂಡಿರುವ ಭಾವಚಿತ್ರ ಮತ್ತು ಸಹಿಯನ್ನು ಕಂಪ್ಯೂಟರ್ ಮುಖೇನ ಅಪ್‌ಲೋಡ್ (Upload) ಮಾಡುವುದು.ಇಲ್ಲವಾದಲ್ಲಿ ಅಂತಹ ಅರ್ಜಿದಾರರು ಆನ್‌ಲೈನ್‌ನಲ್ಲಿ ಅರ್ಜಿಯನ್ನುತುಂಬಿ ಮುಂದುವರೆಯಲು ಸಾಧ್ಯವಾಗುವುದಿಲ್ಲ. ಅರ್ಜಿದಾರ ನೀಡಿರುವ ವಿವರಗಳು ಎಲ್ಲಾರೀತಿಯಿಂದಲೂ ಸಮರ್ಪಕವಾಗಿದ್ದಲ್ಲಿ ಮಾತ್ರ ಚಲನ್ ಮುದ್ರಿಸಬಹುದು.ಚಲನ್ ಮುದ್ರಿಸಲುಜನರೇಟ್ ಚಲನ್ ಬಟನ್ ಮೇಲೆ ಕ್ಲಿಕ್ ಮಾಡಿದಲ್ಲಿ ತ್ರಿಪ್ರತಿ (Triplicate) ಬ್ಯಾಂಕ್ ಚಲನ್‌ಸೃಜನೆಯಾಗುತ್ತದೆ.ಆ ಚಲನ್‌ನಲ್ಲಿ ಅರ್ಜಿಯ ಸಂಖ್ಯೆಯೊಂದಿಗೆ, ನಿಮ್ಮ ಭಾವಚಿತ್ರ, ಪ್ರವರ್ಗ, ಮೀಸಲಾತಿಗಳ ವಿವರ ಮತ್ತು ಪಾವತಿಸಬೇಕಾಗಿರುವನಿಗದಿತ ಶುಲ್ಕಗಳ ವಿವರಗಳು ಇರುತ್ತದೆ.ಆ ಚಲನ್ ಪ್ರತಿಯನ್ನು ಮುದ್ರಿಸಿ/ಪ್ರಿಂಟ್‌ಮಾಡಿಕೊಳ್ಳತಕ್ಕದ್ದು.

1) ನಂತರ ಅರ್ಜಿದಾರ ಮುದ್ರಿಸಿಕೊಳ್ಳಲಾದ ಚಲನ್‌ನಲ್ಲಿ ನಮೂದಾಗಿರುವ ಶುಲ್ಕವನ್ನು ನಗದುರೂಪದಲ್ಲಿಯೇ ಅಧಿಕೃತ ಎಸ್.ಬಿ.ಎಂ ಅಥವಾ ಎಸ್.ಬಿ.ಹೆಚ್ ಬ್ಯಾಂಕ್ ಶಾಖೆಗಳಲ್ಲಿಪಾವತಿಸಬೇಕಾಗಿರುತ್ತದೆ. ಶುಲ್ಕ ಪಾವತಿಸಿದ ನಂತರ ಚಲನ್‌ನ 'ಅಭ್ಯರ್ಥಿ ಪ್ರತಿ'ಯನ್ನುಇಟ್ಟುಕೊಂಡಿರತಕ್ಕದು.
2) ಅಭ್ಯರ್ಥಿಯ ಶುಲ್ಕ ಪಾವತಿಸಿದ ಮರುದಿನ ಪುನಃ ಇಲಾಖೆಯ ಅಧಿಕೃತ ವೆಬ್‌ಸೈಟ್ www.ksfesonline.inನಲ್ಲಿ My Applicationನ್ನು ಕ್ಲಿಕ್ ಮಾಡಿ, ತಮ್ಮ ಅರ್ಜಿ ಸಂಖ್ಯೆ ಮತ್ತುಜನ್ಮ ದಿನಾಂಕ ನಮೂದಿಸಿದ ನಂತರವೇ ಅರ್ಜಿ ತೆರೆಯುತ್ತದೆ ಹಾಗೂ ಅಭ್ಯರ್ಥಿಯು ಭರ್ತಿಮಾಡಿರುವ ಎಲ್ಲಾ

ವಿವರಗಳನ್ನು ಒಳಗೊಂಡಂತೆ ಅರ್ಜಿಯು ಸೃಜನೆಯಾಗುತ್ತದೆ, ಭರ್ತಿಮಾಡಿದ ಆನ್‌ಲೈನ್ ಅರ್ಜಿಯ ಪ್ರತಿಯನ್ನು ಪ್ರಿಂಟ್ ಮಾಡಿಟ್ಟುಕೊಳ್ಳತಕ್ಕದ್ದು. ಈ ಅರ್ಜಿಸಂಖ್ಯೆಯು ಮುಂದಿನ ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ.

3) ಆನ್‌ಲೈನ್ ಮುಖಾಂತರ ದಿನಾಂಕ: 06.03.2015 ರಂದು ಬೆಳಿಗ್ಗೆ 10–00 ಗಂಟೆಯಿಂದದಿನಾಂಕ: 05.04.2015ರ ಸಂಜೆ 06.00 ಗಂಟೆಯವರೆಗೆ ಅರ್ಜಿ ಸಲ್ಲಿಸಬಹುದಾಗಿದೆ.ಶುಲ್ಕವನ್ನು ಬ್ಯಾಂಕಿನಲ್ಲಿ **ನಗದು ರೂಪದಲ್ಲಿ** ಪಾವತಿಸಲು ದಿನಾಂಕ: 07.04.2015 ರಂದು ಕೊನೆಯದಿನಾಂಕವಾಗಿರುತ್ತದೆ. ನಗದು ಶುಲ್ಕವನ್ನು ಬ್ಯಾಂಕ್‌ನ ಕಛೇರಿಯ ವೇಳೆಯಲ್ಲಿ ಮಾತ್ರ ಪಾವತಿಸತಕ್ಕದ್ದು.ಒಂದು ದಿನದ ನಂತರ ಅರ್ಜಿಯ ಪ್ರತಿಯನ್ನು ಮುದ್ರಿಸಿಕೊಳ್ಳತಕ್ಕದ್ದು.

4) ನೇಮಕಾತಿಗೆ ಸಂಬಂಧಪಟ್ಟ ಎಲ್ಲಾ ಮಾಹಿತಿಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್www.ksfesonline.inನ ಮುಖಾಂತರ ಪಡೆದುಕೊಳ್ಳಲು ಸೂಚಿಸಲಾಗಿದೆ. ಉದಾಹರಣೆ: ಅರ್ಜಿಯಶಸ್ವಿಯಾಗಿರುವ ಕುರಿತು, ಅರ್ಹತಾ ಪಟ್ಟಿ, ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆಯದಿನಾಂಕ, ಕರೆಪತ್ರ/ಲಿಖಿತ ಪರೀಕ್ಷೆಯ ದಿನಾಂಕ, ಕರೆಪತ್ರಗಳು/ವೈದ್ಯಕೀಯ ಪರೀಕ್ಷೆಯ ದಿನಾಂಕ, ಕರೆಪತ್ರಗಳು ಇತ್ಯಾದಿ,

5) ಅರ್ಜಿದಾರರನು ಆನ್‌ಲೈನ್‌ನಲ್ಲಿ ಅರ್ಜಿಯನ್ನು ತುಂಬಲು ಗಣಕಯಂತ್ರದಲ್ಲಿ ಅಂತರ್ಜಾಲದ SOFTWARE, Internet Explorer 8 or 9 ಅಥವಾ Google Chromeಅಥವಾ Firefoxನಲ್ಲಿ ಅಳವಡಿಸಿಕೊಂಡಿರಬೇಕು.

6) ಗಣಕಯಂತ್ರದ ಪರದೆಯ ಮೇಲೆ ಭಿತ್ತರಿಸಿರುವ ಕನ್ನಡದ ಅಕ್ಷರಗಳು ನುಡಿ ತಂತ್ರಾಂಶವನ್ನುಬಳಸಿ ಮುದ್ರಿಸಲ್ಪಟಿದೆ. ಕನ್ನಡ ಅಕ್ಷರಗಳು ಗಣಕಯಂತ್ರದಲ್ಲಿ JUNK CHARACTERರೂಪದಲ್ಲಿ ಗಣಕಯಂತ್ರದ ಪರದೆಯ ಮೇಲೆ ಮೂಡಿದರೆ, ಅದನ್ನು ಸರಿಪಡಿಸಲುಗಣಕಯಂತ್ರದಲ್ಲಿ NUDI SOFTWAREಅಳವಡಿಸಿಕೊಳ್ಳಲು ಸೂಚಿಸಲಾಗಿದೆ.

**ಅರ್ಜಿ ಸಲ್ಲಿಸಲು ಪ್ರಾರಂಭ ಮತ್ತು ಕೊನೆಯ ದಿನಾಂಕ ಹಾಗೂ ಶುಲ್ಕ ಪಾವತಿಸಲು ಕೊನೆಯ ದಿನಾಂಕ:**

- **ಅರ್ಜಿ ಸಲ್ಲಿಸಲು ಪ್ರಾರಂಭದ ದಿನಾಂಕ: 06.03.2015, ಬೆಳಿಗ್ಗೆ 10:00 ಗಂಟೆಯಿಂದ.**
- **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ : 05.04.2015, ಸಂಜೆ 06:00 ಗಂಟೆವರೆಗೆ.**
- **ಶುಲ್ಕವನ್ನು ಅಧಿಕೃತ ಬ್ಯಾಂಕ್ ಶಾಖೆಗಳ ಕಛೇರಿ ವೇಳೆಯಲ್ಲಿ ಪಾವತಿಸಲು ಕೊನೆಯ ದಿನಾಂಕ: 07.04.2015.**

1) ಅರ್ಹ ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೆಕಾಯದೇ ಮುಂಚಿತವಾಗಿ ಅರ್ಜಿಯನ್ನು ಸಲ್ಲಿಸುವುದು.

2) ಅರ್ಜಿ ಪೂರ್ಣಗೊಳಿಸಿದ ನಂತರ ಚಲನ್ ಮುಖಾಂತರ ಶುಲ್ಕವನ್ನು ಪಾವತಿಸುವಂತೆಸೂಚಿಸಲಾಗಿದೆ.

3) ಶುಲ್ಕ ಪಾವತಿಸಿದ ಮರುದಿನ/ಎರಡು ದಿನದ ನಂತರ ಅರ್ಜಿಯ ಪ್ರತಿಯನ್ನು ಅಧಿಕೃತವೆಬ್‌ಸೈಟ್‌ನ ಮುಖಾಂತರ ಪಡೆಯಲು ಸೂಚಿಸಲಾಗಿದೆ.

4) ಶುಲ್ಕವನ್ನು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು (ಎಸ್‌ಬಿಎಂ)ನಲ್ಲಿ ಮಾತ್ರ ಪಾವತಿಸತಕ್ಕದ್ದು.ಎಸ್‌ಬಿಎಂ ಲಭ್ಯವಿಲ್ಲದಿದ್ದಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್(ಎಸ್‌ಬಿಹೆಚ್) ನಲ್ಲಿಪಾವತಿಸತಕ್ಕದ್ದು.

5) ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿ ಮಾಡುವ ಸಂದರ್ಭದಲ್ಲಿ ತಾಂತ್ರಿಕ ಅಥವಾ ಬೇರೆಸಮಸ್ಯೆ ಎದುರಾದಲ್ಲಿ ನೇಮಕಾತಿ ಸಮಿತಿಯ ಸಹಾಯವಾಣಿ ಸಂಖ್ಯೆ: 080–22971605/06 ಗೆಕರೆ ಮಾಡಿ ಅಗತ್ಯ ಮಾಹಿತಿಯನ್ನು ಪಡೆದು ಅರ್ಜಿಯನ್ನು ಸಲ್ಲಿಸಬಹುದು.

6) ನಿಗದಿತ ದಿನಾಂಕದ ನಂತರ ಶುಲ್ಕವನ್ನು ಪಾವತಿಸಿದ ಅರ್ಜಿದಾರರ ಅರ್ಜಿಗಳನ್ನುತಿರಸ್ಕರಿಸಲಾಗುವುದು. ಸ್ಟೇಟ್ ಬ್ಯಾಂಕ್ ಅಫ್ ಮೈಸೂರು ಮತ್ತು ಸ್ಟೇಟ್ ಬ್ಯಾಂಕ್ ಆಫ್‌ಹೈದ್ರಾಬಾದ್ ಹೊರತು ಪಡಿಸಿ ಬೇರೆ ಯಾವುದೇ ಬ್ಯಾಂಕನಲ್ಲಿ ಶುಲ್ಕವನ್ನು ಪಾವತಿಸತಕ್ಕದ್ದಲ್ಲ.

7) ಶುಲ್ಕ ಪಾವತಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಆನ್‌ಲೈನ್ ಮೂಲಕ ಅಗತ್ಯಮಾಹಿತಿಯನ್ನು ಭರ್ತಿ ಮಾಡಿ ಚಲನ್‌ನ್ನು ಸೃಜಿಸಿ, ಚಲನ್ ಮೂಲಕ ಮಾತ್ರವೇ ಸ್ಟೇಟ್ ಬ್ಯಾಂಕ್‌ಅಫ್ ಮೈಸೂರು / ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್‌ನಲ್ಲಿ ಮಾತ್ರ ಶುಲ್ಕ ಪಾವತಿಸಬಹುದಾಗಿದೆ.ಬೇರ್‍ಯಾವುದೇ ಬ್ಯಾಂಕಿನಲ್ಲಿ ಶುಲ್ಕ ಪಾವತಿಸಲು ಅವಕಾಶವಿಲ್ಲ. ಬ್ಯಾಂಕ್ ಹುಂಡಿ, ಪೋಸ್ಟಲ್‌ಆರ್ಡರ್, ಮನಿ ಆರ್ಡರ್ ಅಥವಾ ಇನ್ನ್ಯಾವುದೇ ಸ್ವರೂಪದಲ್ಲಿ ಶುಲ್ಕ ಪಾವತಿಸತಕ್ಕದ್ದಲ್ಲ ಹಾಗೂಅಂತಹ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.

8) ಒಮ್ಮೆ ಪಾವತಿಸಿದ ಶುಲ್ಕವನ್ನು ಯಾವುದೇ ಕಾರಣಗಳಿಗೂ ಹಿಂದಿರುಗಿಸಲಾಗುವುದಿಲ್ಲ ಮತ್ತು ಅದನ್ನು ನೇಮಕಾತಿ ಸಮಿತಿಯು ನಡೆಸುವ ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆಹೊಂದಿಸಿಕೊಳ್ಳಲಾಗುವುದಿಲ್ಲ.

9) ಮೀಸಲಾತಿ ಕೋರುವ ಪ್ರಮಾಣ ಪತ್ರಗಳು ಅಧಿಸೂಚನೆಯಲ್ಲಿ ನಮೂದಿಸಿರುವಂತಹನಿಯಮಗಳ ನಮೂನೆಯಲ್ಲಿಯೇ ಇರಬೇಕು. ಸದರಿ ಪ್ರಮಾಣ ಪತ್ರಗಳನ್ನು ಸಂಬಂಧಪಟ್ಟಪ್ರಾಧಿಕಾರದಿಂದ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆಪಡೆದಿಟ್ಟುಕೊಂಡಿರತಕ್ಕದ್ದು.

10) ಯಾವುದೇ ದಾಖಲೆಗಳನ್ನು ಅಂಚೆ ಮೂಲಕವಾಗಲಿ ಅಥವಾ ಮುದ್ದಾಂ ಆಗಿ ಸಲ್ಲಿಸತಕ್ಕದ್ದಲ್ಲ.

11) ಮೀಸಲಾತಿಯನ್ನು ಕೋರ ಬಯಸುವ ಅರ್ಜಿದಾರರುಗಳು ಆನ್‌ಲೈನ್ ಅರ್ಜಿಯಲ್ಲಿ ಮೀಸಲಾತಿಸೌಲಭ್ಯಕ್ಕಾಗಿ ಇರುವ ಅಂಕಣವನ್ನು ಕಡ್ಡಾಯವಾಗಿ ಭರ್ತಿ ಮಾಡತಕ್ಕದ್ದು. ಅಂಕಣವನ್ನು ಖಾಲಿಬಿಟ್ಟಿದ್ದಲ್ಲಿ ಸಾಮಾನ್ಯ ವರ್ಗ ಎಂದು ಪರಿಗಣಿಸಲಾಗುವುದು. ನಂತರ ಯಾವುದೇ ಹಂತದಲ್ಲಿಮೀಸಲಾತಿಯನ್ನು ಸೇರ್ಪಡೆ ಮಾಡಲು ಅವಕಾಶವಿರುವುದಿಲ್ಲ. ಒಂದು ವೇಳೆ ತಪ್ಪಾಗಿ ನಮೂಧಿಸಿದ್ದರೆ, ನಂತರ ತಿದ್ದುಪಡಿಗೆ ಅವಕಾಶವಿರುವುದಿಲ್ಲ ಮತ್ತು ಅಂತಹ ಅರ್ಜಿದಾರರುಗಳನ್ನುಅರ್ಹತೆ ಹೊಂದಿದಲ್ಲಿ ಸಾಮಾನ್ಯ ವರ್ಗದ ಅಭ್ಯರ್ಥಿಗಳೆಂದು ಪರಿಗಣಿಸಲಾಗುವುದು

12) ಆಯ್ಕೆಯಾಗಿರುವ ಎಲ್ಲಾ ಅರ್ಹ ಅಭ್ಯರ್ಥಿಗಳು ದಾಖಲೆ ಪರಿಶೀಲನೆ ಸಮಯದಲ್ಲಿ ಆನ್‌ಲೈನ್‌ಮೂಲಕ ಸಲ್ಲಿಸಿದ ಅರ್ಜಿಯ ಮುದ್ರಿತ ಪ್ರತಿಯನ್ನು ಹಾಗೂ ನಿಗದಿತ ಶುಲ್ಕವನ್ನು ಪಾವತಿಸಿರುವಚಲನ್‌ನ ಅಭ್ಯರ್ಥಿ ಪ್ರತಿಯನ್ನು ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ದಾಖಲೆ ಪರಿಶೀಲನೆಗೆಪರಿಗಣಿಸಲಾಗುವುದಿಲ್ಲ.

13) ನಿಗದಿತ ಶುಲ್ಕವನ್ನು ಬ್ಯಾಂಕ್‌ನಲ್ಲಿ ಪಾವತಿಸಿದ ನಂತರ, ಬ್ಯಾಂಕ್ ಸಿಬ್ಬಂದಿಯವರುಬ್ರಾಂಚ್‌ಕೋಡ್, ಜರ್ನಲ್ ಸಂಖ್ಯೆ, ಶುಲ್ಕ ಸಂದಾಯವಾದ ದಿನಾಂಕ ಮತ್ತು ಶುಲ್ಕಸ್ವೀಕರಿಸಿರುವವರ ಸಹಿಯೊಂದಿಗೆ ಮಾಹಿತಿಯನ್ನು ಸರಿಯಾಗಿ ನಮೂದಿಸಿರುವರೆಂದುಅರ್ಜಿದಾರರು ಖಾತ್ರಿ ಪಡಿಸಿಕೊಳ್ಳಲು ಸೂಚಿಸಲಾಗಿದೆ.

14) ಆನ್‌ಲೈನ್‌ನಲ್ಲಿ ಅರ್ಜಿಯನ್ನು ಭರ್ತಿ ಮಾಡಿದ ನಂತರ ನಿಗದಿತ ಶುಲ್ಕ ಪಾವತಿಸಲುಸೃಜನೆಯಾಗುವ ಬ್ಯಾಂಕ್ ಚಲನ್ ಮತ್ತು ಪೂರ್ಣಗೊಳಿಸಿದ ಅರ್ಜಿಯನ್ನು ಗಣಕಯಂತ್ರದಪರದೆಯ ಮೇಲೆ ಭಿತ್ತರಿಸಲು ಗಣಕಯಂತ್ರದಲ್ಲಿ PDF Reader Software ಅಳವಡಿಸಿರಬೇಕು.ಇಲ್ಲದಿದ್ದಲ್ಲಿ PDF Reader Software ಅಳವಡಿಸಿಕೊಳ್ಳಲು ಸೂಚಿಸಲಾಗಿದೆ.

**ಅರ್ಜಿ ಸಲ್ಲಿಸ ಬಯಸುವ ಅರ್ಜಿದಾರರುಗಳು ಈ ಕೆಳಕಂಡ ಪ್ರಮಾಣ ಪತ್ರಗಳನ್ನು ಅರ್ಜಿಗಳನ್ನು ಸ್ವೀಕರಿಸಲುನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಸಿಂಧುವಾಗಿರುವಂತೆ ಪಡೆದಿಟ್ಟುಕೊಂಡಿರತಕ್ಕದ್ದು :**

1) ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿ.
2) ಹುಟ್ಟಿದ ದಿನಾಂಕದ ಪ್ರಮಾಣ ಪತ್ರ
3) ಸರ್ಕಾರಿ ಇಲಾಖೆಯಲ್ಲಿ (ರಾಜ್ಯಸರ್ಕಾರದ ಅಥವಾ ಕೇಂದ್ರ ಸರ್ಕಾರದ)/ಸರ್ಕಾರದ ಯಾವುದೇಪ್ರಾಧಿಕಾರದಲ್ಲಿ /ರಾಜ್ಯ ಅಥವಾ ಕೇಂದ್ರ ಸರ್ಕಾರದ ಸಾರ್ವಜನಿಕ ಸ್ವಾಮ್ಯದ ಕಂಪನಿಗಳಲ್ಲಿಪ್ರಸ್ತುತ ಉದ್ಯೋಗಿಯಾಗಿದ್ದಲ್ಲಿ ಅಂತಹವರು ಇಲಾಖಾವತಿಯಿಂದ ನೀಡಲಾಗುವ ಕರ್ತವ್ಯದಿಂದಬಿಡುಗಡೆ ಮಾಡುವ ಬಗ್ಗೆ ಇಚ್ಛಾ ಅನುಮತಿ ಪತ್ರ / ನಿರಾಪೇಕ್ಷಣ ಪ್ರಮಾಣಪತ್ರ.
4) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಕೋರುವ ಅರ್ಜಿದಾರರುಗಳು ತಹಶೀಲ್ದಾರ್‌ರಿಂದ ಪಡೆದ ನಮೂನೆ ಡಿ/ಇ/ಎಫ್ ಪ್ರಮಾಣಪತ್ರಗಳು.
5) ಯೋಜನಾ ನಿರಾಶ್ರಿತ ಮೀಸಲಾತಿ ಕೋರುವ ಅರ್ಜಿದಾರರುಗಳು ಸಂಬಂಧಿಸಿದತಹಶೀಲ್ದಾರ್‌ರವರಿಂದ ಪಡೆದ ಪ್ರಮಾಣ ಪತ್ರ.
6) ಮಾಜಿಸೈನಿಕ ಮೀಸಲಾತಿ ಕೋರುವ ಮಾಜಿ ಸೈನಿಕ ಅರ್ಜಿದಾರರುಗಳು ಸೈನ್ಯ ವಿಯೋಜನೆಪ್ರಮಾಣಪತ್ರ/ ನಿರಾಪೇಕ್ಷಣಾ ಪ್ರಮಾಣಪತ್ರ (Discharge Certificate/NOC)
7) ಮಾಜಿ ಸೈನಿಕರು ಸೇವೆ ಸಲ್ಲಿಸುವಾಗ ಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದವ್ಯಕ್ತಿಗಳ ಕುಟುಂಬದವರು ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ, ಕರ್ತವ್ಯ ನಿರ್ವಹಿಸುತ್ತಿದ್ದ ಕೇಂದ್ರ ಸಶಸ್ತ್ರದಳದ ಅಧಿಕಾರಿಗಳಿಂದ ಅವಲಂಬಿತ ಪ್ರಮಾಣಪತ್ರ ಮತ್ತು ಸೈನಿಕ ಬೋರ್ಡ್‌ನಿಂದಪಡೆದ ಪ್ರಮಾಣಪತ್ರ.
8) ಗ್ರಾಮೀಣ ಮೀಸಲಾತಿ ಕೋರುವ ಅರ್ಜಿದಾರರುಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಪ್ರಮಾಣ ಪತ್ರವನ್ನುಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿರುವ ಪ್ರಮಾಣಪತ್ರ.
9) ಕನ್ನಡ ಮಾಧ್ಯಮ ಮೀಸಲಾತಿ ಕೋರುವ ಅರ್ಜಿದಾರರುಗಳು 1ನೇ ತರಗತಿಯಿಂದ 10ನೇತರಗತಿಯ ವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಪ್ರಮಾಣಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿಟ್ಟುಕೊಂಡಿರುವ ಪ್ರಮಾಣಪತ್ರ.
10) ಸ್ಥಳೀಯ ವ್ಯಕ್ತಿಯೆಂಬ ಹೈದರಾಬಾದ್ –ಕರ್ನಾಟಕ ಪ್ರದೇಶದ ಮೀಸಲಾತಿಯನ್ನು ಕ್ಲೇಮು ಮಾಡುವ ಯಾವುದೇ ವ್ಯಕ್ತಿ ಸಕ್ಷಮ ಪ್ರಾಧಿಕಾರಿಯಾದ ಆಸಿಸ್ಟೆಂಟ್ ಕಮೀಷನರ್‌ರವರು ನೀಡುವ ಅರ್ಹತಾ ಪ್ರಮಾಣ ಪತ್ರವನ್ನು ಪಡೆದುಕೊಳ್ಳತಕ್ಕದ್ದು.
11) ಮಾಹಿತಿ ಭರ್ತಿ ಮಾಡುವ ಮುನ್ನ ಬಿಳಿ ಹಾಳೆಯ ಮೇಲೆ ತಮ್ಮ ಇತ್ತೀಚಿನ ಭಾವಚಿತ್ರ ಮತ್ತುಸಹಿಯನ್ನು ಪ್ರತ್ಯೇಕವಾಗಿ Scanಮಾಡಿಕೊಂಡಿರತಕ್ಕದ್ದು.

    ಭಾವಚಿತ್ರ (ಕಲರ್) : 400 X 400 pixel,size < 250KB
    ಸಹಿ ( ಕಪ್ಪು ಶಾಯಿ) : 400X 100 pixel, size < 250 KB
    gif, jpg, jpeg and pngಫಾರ್‌ಮ್ಯಾಟ್‌ನಲ್ಲಿರತಕ್ಕದ್ದು.

**ಟಿಪ್ಪಣಿ:–**

ಭಾವಚಿತ್ರ ಮತ್ತು ಸಹಿ ಇವುಗಳನ್ನು Scanಮಾಡಿ upload ಮಾಡಿದಾಗ ಸ್ಪಷ್ಟವಾಗಿ ಗೋಚರಿಸದಿದ್ದಲ್ಲಿ ಅಂತಹಃ ಅರ್ಜಿಯನ್ನು ತಿರಸ್ಕರಿಸಲಾಗುವುದು.

ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದ ನಂತರ ಮಾಡಿಸುವ/ಪಡೆಯುವ ಮೀಸಲಾತಿ ಪ್ರಮಾಣ ಪತ್ರಗಳನ್ನು ಯಾವುದೇ ಹಂತದಲ್ಲಿ ಗಣನೆಗೆತೆಗೆದುಕೊಳ್ಳುವುದಿಲ್ಲ.

**ಪ್ರಮುಖವಾದ ಸೂಚನೆಗಳು:**

1) ಅರ್ಹಗೊಂಡ ಅಭ್ಯರ್ಥಿಗಳಿಗೆ ಅಂಚೆ ಮುಖಾಂತರ ಕರೆಪತ್ರವನ್ನು ರವಾನಿಸಲಾಗುವುದಿಲ್ಲ.ವೆಬ್‌ಸೈಟ್ ಮುಖಾಂತರ ಪಡೆದುಕೊಳ್ಳಲು ಸೂಚಿಸಲಾಗಿದೆ.
2) ಆನ್‌ಲೈನ್ ಮುಖಾಂತರ ಅರ್ಜಿ ಸಲ್ಲಿಸಿದ ನಂತರ ಯಾವುದೇ ಹಂತದಲ್ಲೂ ಮಾಹಿತಿಗಳಬದಲಾವಣೆಗೆ ಅವಕಾಶವಿರುವುದಿಲ್ಲ.
3) ಒಂದು ವೇಳೆ ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿಯನ್ನು ಸಲ್ಲಿಸಿದ ನಂತರ ತಿದ್ದುಪಡಿಮಾಡುವ ಅಗತ್ಯತೆ ಕಂಡು ಬಂದಲ್ಲಿ ಹೊಸ ಅರ್ಜಿಯನ್ನು ಶುಲ್ಕ ಪಾವತಿಸಿ ಸಲ್ಲಿಸತಕ್ಕದ್ದು.
4) ಆನ್‌ಲೈನ್ ಮೂಲಕ ಅರ್ಜಿಯಲ್ಲಿ ಸಲ್ಲಿಸಿರುವ ಮಾಹಿತಿಗಳನ್ನೇ ಆಧಾರವಾಗಿಟ್ಟುಕೊಂಡುಅಭ್ಯರ್ಥಿಗಳನ್ನು ಆಯ್ಕೆ ಮಾಡುವುದರಿಂದ ಯಾವುದೇ ಹಂತದಲ್ಲಿ ಅಭ್ಯರ್ಥಿಯು ನೀಡಿದಮಾಹಿತಿಯು ಅಪೂರ್ಣ/ ಅಸ್ಪಷ್ಟ / ತಪ್ಪು ಎಂದು ಕಂಡು ಬಂದಲ್ಲಿ ಅದಕ್ಕೆ ಅಭ್ಯರ್ಥಿಗಳೇಸಂಪೂರ್ಣ ಹೊಣೆಗಾರರಾಗಿರುತ್ತಾರೆ.

5) ಮಾಜಿ ಸೈನಿಕ ಅಭ್ಯರ್ಥಿಗಳು ವಿದ್ಯಾರ್ಹತೆಯ ಪ್ರಮಾಣ ಪತ್ರವನ್ನು ದಿನಾಂಕ: 05.04.2015ರೊಳಗೆ ಹೊಂದಿದ್ದರೆ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ಮಾತ್ರ ಪರಿಗಣಿಸಲಾಗುವುದು.

6) ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂದು, ತಪ್ಪಿತಸ್ಥನೆಂದು ಕಂಡುಬಂದಲ್ಲಿ ಅಥವಾ ಒಂದು ಕೇಂದ್ರದಲ್ಲಿ ದೈಹಿಕ ಪರೀಕ್ಷೆಗಳಿಗೆ ಹಾಜರಾಗಿರುವ ವಿಷಯವನ್ನು ಮರೆಮಾಚಿ ಮತ್ತೊಮ್ಮೆ ಅದೇ ಕೇಂದ್ರದಲ್ಲಿ ದೈಹಿಕ ಪರೀಕ್ಷೆಗೆ ಹಾಜರಾದರೆ ಹಾಗೂ ನೇಮಕಾತಿ ಸಮಿತಿಯಿಂದ ನೀಡಲಾದ ಯಾವುದೇ ಸೂಚನೆಗಳ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತುಕ್ರಮಕ್ಕೆ ಒಳ ಪಡುವುದಲ್ಲದೇ ನೇಮಕಾತಿ ಸಮಿತಿ ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

7) ಯಾವುದೇ ಅರ್ಜಿದಾರರು ಕ್ರಿಮಿನಲ್ ಮೊಕದ್ದಮೆಯಲ್ಲಿ ಶಿಕ್ಷೆಗೆ ಗುರಿಯಾಗಿರಬಾರದು. ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿ ಬಿಡುಗಡೆ / ಖುಲಾಸೆಯಾಗಿದ್ದಲ್ಲಿ ನೇಮಕಾತಿ ಪ್ರಾಧಿಕಾರವು ತೆಗೆದುಕೊಳ್ಳುವ ತೀರ್ಮಾನವೇ ಅಂತಿಮವಾಗಿರುತ್ತದೆ.

**ಹೈದ್ರಾಬಾದ್ –ಕರ್ನಾಟಕ ಪ್ರದೇಶಕ್ಕೆ ಮೀಸಲಿರುವ ಹುದ್ದೆಗೆ ಕ್ಲೇಮು.**

ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು 2013ಕ್ಕೆ ಸಂಬಂಧಿಸಿದಂತೆ ನೇರ ನೇಮಕಾತಿಯಲ್ಲಿ ಸ್ಥಳೀಯ ವ್ಯಕ್ತಿಯೆಂಬ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು **ಅನುಬಂಧ–8**ರಲ್ಲಿ ಸೂಚಿಸಿರುವ ನಮೂನೆಯಲ್ಲಿಯೇ ಅರ್ಹತಾ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರವಾದ ಸಂಬಂಧಪಟ್ಟ ಉಪವಿಭಾಗದ ಸಹಾಯಕ ಆಯುಕ್ತರಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಹಿ, ಮೊಹರು ಮತ್ತು ಜಾರಿ ಮಾಡಿದ ದಿನಾಂಕದೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು. ಇದೇ ಪ್ರಮಾಣ ಪತ್ರದ ಪ್ರತಿಯನ್ನು ದೇಹದಾರ್ಡತೆ ಹಾಗೂ ದೈಹಿಕ ಸಾಮರ್ಥ್ಯದ ಪರೀಕ್ಷೆಯ ಸಂದರ್ಭದಲ್ಲಿ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು.ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುತ್ತದೆ.ಈ ಪ್ರಮಾಣ ಪತ್ರದ ನಮೂನೆಯನ್ನು ಅನುಬಂಧ–8 ರಲ್ಲಿ ತೋರಿಸಲಾಗಿದೆ.ಈ ನಮೂನೆಯನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಯಲ್ಲಿ ಪಡೆಯಲಾದ ಅರ್ಹತಾ ಪ್ರಮಾಣ ಪತ್ರವನ್ನು ತಿರಸ್ಕರಿಸಲಾಗುವುದು.

ಇದಲ್ಲದೇ, ಅಭ್ಯರ್ಥಿಗಳು ಹೈದರಾಬಾದ್ –ಕರ್ನಾಟಕ ಪ್ರದೇಶ ಮೀಸಲಾತಿಯನ್ನು ಹೊರತು ಪಡಿಸಿ ಮೀಸಲಿರಿಸಿದ ಹುದ್ದೆಗಳಿಗೆ ಆಯ್ಕೆ ಬಯಸುವಾಗ ಎಚ್ಚರಿಕೆಯಿಂದ ಅರ್ಜಿ ಸಲ್ಲಿಸುವುದು.

**ವಿಶೇಷ ಸೂಚನೆಗಳು:–**

**ಎ) ಭಾರತ ಸಂವಿಧಾನದ ಅನುಚ್ಛೇದ 371(ಜೆ) ಅನುಷ್ಠಾನಕ್ಕೆ ಸಂಬಂಧಿಸಿದಂತೆ, ಹೊರಡಿಸಲಾದ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013 ಹಾಗೂ ಸದರಿ ಆದೇಶಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ತಿದ್ದುಪಡಿಯಂತೆ ಮೀಸಲಾತಿಗೆಂದು ಗುರುತಿಸಿ, ಸ್ಥಳೀಯ ವೃಂದಕ್ಕೆ ಒಳಪಡುವ ಹುದ್ದೆಗಳನ್ನು ಪ್ರತ್ಯೇಕವಾಗಿ ನೀಡಲಾಗಿರುತ್ತದೆ. ಸ್ಥಳೀಯ ವೃಂದದ ಹುದ್ದೆಗಳನ್ನು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾರಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರ ಕಂಡಿಕೆ 2(1)(ಎಫ್) ಅರ್ಥ ವಿವರಣೆಯ ಅಡಿಯಲ್ಲಿ ವರ್ಗೀಕರಿಸಲು ಅರ್ಹವಿರುವ ಅಭ್ಯರ್ಥಿಗಳಿಂದ ಮಾತ್ರ ತುಂಬಲಾಗುವುದು. ಈ ಹಿನ್ನೆಲೆಯಲ್ಲಿ, ಸ್ಥಳೀಯ ವೃಂದದಲ್ಲಿ ಲಭ್ಯವಿರುವ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಸಾರ್ವಜನಿಕ ಉದ್ಯೋಗ ಆದೇಶದಂತೆ ಅರ್ಹ ಸ್ಥಳೀಯ ವ್ಯಕ್ತಿಗಳು ಮಾತ್ರ ಅರ್ಹರಿರುತ್ತಾರೆ.ಪರಂತು, ಮಿಕ್ಕುಳಿದ ವೃಂದದಲ್ಲಿ ಲಭ್ಯವಿರುವ ಖಾಲಿ ಹುದ್ದೆಗಳಿಗೆ ಇತರರೊಂದಿಗೆ ಸ್ಥಳೀಯ ವ್ಯಕ್ತಿಗಳು ಸಹ ಅರ್ಜಿ ಸಲ್ಲಿಸುವ ಅವಕಾಶ ಕಲ್ಪಿಸಲಾಗಿರುತ್ತದೆ.**

**ಬಿ) ಹೈದರಾಬಾದ್–ಕರ್ನಾಟಕ ಮೀಸಲಾತಿ ಹೊಂದಿರುವ ಸ್ಥಳೀಯ ಅಭ್ಯರ್ಥಿಗಳು ಹೈದರಾಬಾದ್–ಕರ್ನಾಟಕ ಮೀಸಲಾತಿಯಡಿ ಮೀಸಲಾಗಿರುವ (ಸ್ಥಳೀಯ ವೃಂದದ) ಹಾಗೂ ಮಿಕ್ಕುಳಿದ (ಸ್ಥಳಿಯೇತರ ವೃಂದದ) ಹುದ್ದೆಗಳಿಗೂ ಅರ್ಜಿ ಸಲ್ಲಿಸಿ ಎರಡು ವೃಂದಗಳಲ್ಲಿಯೂ ಅರ್ಹರಾದರೆ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಆಧ್ಯತೆಯನುಸಾರ ಆರ್ಹತೆಯನ್ನು ಪರಿಗಣಿಸಲಾಗುವುದು.**

**ಸಿ) ಹೈದರಾಬಾದ್–ಕರ್ನಾಟಕ ಮೀಸಲಾತಿ ಹೊಂದಿರದ ಅಭ್ಯರ್ಥಿಗಳು ಹೈದರಾಬಾದ್–ಕರ್ನಾಟಕ ಮೀಸಲಾತಿಯಡಿ ಮೀಸಲಿರಿಸಲಾಗಿರುವ ಹುದ್ದೆಗಳಿಗೆ ಅರ್ಜಿ ಸಲ್ಲಿಸುವಂತಿಲ್ಲ. ಆದ್ದರಿಂದ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವಾಗ ಮೇಲ್ಕಂಡ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಅರ್ಜಿ ಸಲ್ಲಿಸಬೇಕಾಗಿರುತ್ತದೆ.**

**ಡಿ) ಯಾವುದೇ ಹಂತದಲ್ಲಿಯು ಅಭ್ಯರ್ಥಿಯು ಅರ್ಜಿಯಲ್ಲಿ ಕೋರಿರುವ ಮೀಸಲಾತಿಗಳ ಬದಲಾವಣೆಗೆ ಅವಕಾಶವಿರುವುದಿಲ್ಲ.**

**ಇ) ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ಅಂಶಗಳು / ಮೀಸಲಾತಿಗಳನ್ನು ಆಧರಿಸಿ ನೇಮಕಾತಿ ಪ್ರಕ್ರಿಯೆಗೆ ಅವಕಾಶ ಕಲ್ಪಿಸಿರುವುದರಿಂದ ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಯಾವುದೇ ಮೀಸಲಾತಿ ಬದಲಾವಣೆ ಕೋರಿ ಸಲ್ಲಿಸುವ ಮನವಿಯನ್ನು ಪರಿಗಣಿಸಲಾಗುವುದಿಲ್ಲ.**

**ಸದಸ್ಯ ಕಾರ್ಯದರ್ಶಿ ಹಾಗೂ**
**ಪೊಲೀಸ್ ಮಹಾ ನಿರೀಕ್ಷಕರು ಹಾಗೂ**
**ಹೆಚ್ಚುವರಿ ಮಹಾ ನಿರ್ದೇಶಕರು**
**ಅಗ್ನಿಶಾಮಕ ಠಾಣಾಧಿಕಾರಿ ನೇಮಕಾತಿ ಸಮಿತಿ**
**ಬೆಂಗಳೂರು–560 042.**

**ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗಳ ನೇಮಕಾತಿ– 2015**

**ಅಭ್ಯರ್ಥಿಗಳು ಪದೇ ಪದೇ ಕೇಳಬಹುದಾದಂತಹ ಪ್ರಶ್ನೆಗಳು**

**1.** ನಿಗಧಿಪಡಿಸಲಾಗಿರುವ ಕನಿಷ್ಠ ವಯೋಮಿತಿ?

ಉ: ವೃಂದ ಮತ್ತು ನೇಮಕಾತಿ ತಿದ್ದುಪಡಿ ನಿಯಮ, 2013ರ ಪ್ರಕಾರ **ಅಗ್ನಿಶಾಮಕಠಾಣಾಧಿಕಾರಿ ಹುದ್ದೆ**ಗೆ ವಯೋಮಿತಿಯು ಅರ್ಜಿಯನ್ನು ಸಲ್ಲಿಸಲುನಿಗದಿ ಪಡಿಸಲಾಗಿರುವ ಕೊನೆಯ ದಿನಾಂಕಕ್ಕೆ ಅಂದರೆ05.04.2015 ಕ್ಕೆ ಕನಿಷ್ಠ 21ವರ್ಷತುಂಬಿರಬೇಕು.

**2.** ನಿಗಧಿಪಡಿಸಲಾಗಿರುವ ಗರಿಷ್ಠ ವಯೋಮಿತಿ?

ಉ: ವೃಂದ ಮತ್ತು ನೇಮಕಾತಿ ತಿದ್ದುಪಡಿ ನಿಯಮ, 2013ರ ಪ್ರಕಾರ **ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗೆ**ವಯೋಮಿತಿಯು ಅರ್ಜಿಯನ್ನುಸ್ವೀಕರಿಸಲು ನಿಗಧಿಪಡಿಸಲಾಗಿರುವ ಕೊನೆಯ ದಿನಾಂಕಕ್ಕೆ ಅಂದರೆ 05.04.2015 ಕ್ಕೆ ಸಾಮಾನ್ಯವರ್ಗಕ್ಕೆ ಸೇರಿದ ಅಭ್ಯರ್ಥಿಗಳಿಗೆ ಗರಿಷ್ಠ 26 ವರ್ಷ ಹಾಗೂ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ /ಇತರೆ ಹಿಂದುಳಿದ ವರ್ಗಕ್ಕೆ ಸೇರಿದ ಅಭ್ಯರ್ಥಿಗಳಿಗೆ ಗರಿಷ್ಠ 28 ವರ್ಷಗಳು ಮೀರಿರಬಾರದು.

**3.** ಮಾಜಿ ಸೈನಿಕರಿಗೆ ನಿಗಧಿಪಡಿಸಲಾಗಿರುವ ವಯೋಮಿತಿ?

ಉ: ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಸೇನೆಯಲ್ಲಿ ಸೇವೆ ಸಲ್ಲಿಸಿದ ಅವಧಿಯ ಜೊತೆಗೆ ಹೆಚ್ಚುವರಿ ಮೂರು ವರ್ಷಗಳ ವಿನಾಯಿತಿಯನ್ನು ನೀಡಲಾಗುವುದು.

**4.** ವಿದ್ಯಾರ್ಹತೆ?

ಉ: ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗಳಿಗೆಸಂಬಂಧಿಸಿದಂತೆ:

ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕ: 05.04.2015ಕ್ಕೆ ಮಾನ್ಯತೆ ಪಡೆದಿರುವ ವಿಶ್ವವಿದ್ಯಾಲಯದಿಂದ ವಿಜ್ಞಾನ ಪದವಿ ಹೊಂದಿದ್ದು, ರಾಸಾಯನ ಶಾಸ್ತ್ರವನ್ನು ಒಂದು ವಿಷಯವನ್ನು ಅಧ್ಯಯನವನ್ನು ಮಾಡಿರಬೇಕು (Degree in Science with Chemistry as one of the subjects from recognized University). (ಅಭ್ಯರ್ಥಿಗಳು ವಿದ್ಯಾರ್ಹತೆಯ ಪ್ರಮಾಣ ಪತ್ರವನ್ನು ದಿನಾಂಕ 05.04.2015 ರೊಳಗೆ ಹೊಂದಿದ್ದರೆಅಂತಹ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ಮಾತ್ರ ಪರಿಗಣಿಸಲಾಗುವುದು).

**5.** ಅರ್ಜಿ ಮಾರಾಟವಾಗುತ್ತಿರುವ ಬಗ್ಗೆ ಹೇಗೆ ತಿಳಿದುಕೊಳ್ಳಬಹುದು?

ಉ: ಅರ್ಜಿ ಮಾರಾಟ ಮಾಡಲಾಗುವುದಿಲ್ಲ. ಆಂಗ್ಲ / ಕನ್ನಡ ದಿನಪತ್ರಿಕೆಗಳಲ್ಲಿ ವ್ಯಾಪಕ ಪ್ರಚಾರವನ್ನುನೀಡುವುದಲ್ಲದೆ ದೂರದರ್ಶನ ಮತ್ತು ಆಕಾಶವಾಣಿಗಳಲ್ಲಿ ಪ್ರಸಾರ ಮಾಡಲಾಗುವುದು. ಕಛೇರಿಯ ಅಧಿಕೃತವೆಬ್‌ಸೈಟ್ www.ksfesonline.inನಲ್ಲಿ ನೀಡಲಾಗುವ ಅರ್ಜಿಯನ್ನು ಭರ್ತಿ ಮಾಡಿ ಸಲ್ಲಿಸಬೇಕಾಗಿರುತ್ತದೆ.ಅರ್ಜಿ ಮಾರಾಟವಾಗುತ್ತಿರುವ ಬಗ್ಗೆ ಆಂಗ್ಲ / ಕನ್ನಡ ದಿನಪತ್ರಿಕೆಗಳಲ್ಲಿ ವ್ಯಾಪಕ ಪ್ರಚಾರವನ್ನು ನೀಡುವುದಲ್ಲದೆದೂರದರ್ಶನ ಮತ್ತು ಆಕಾಶವಾಣಿಗಳಲ್ಲಿ ಪ್ರಸಾರ ಮಾಡಲಾಗುವುದು.

**6.** ಅಭ್ಯರ್ಥಿಗಳು ಆನ್‌ಲೈನ್ ಮುಖಾಂತರ ಅರ್ಜಿ ಸಲ್ಲಿಸಲು ಲಭ್ಯವಿರುವ ಖಾಲಿಹುದ್ದೆಗಳು?

ಉ: ಅಗ್ನಿಶಾಮಕಠಾಣಾಧಿಕಾರಿ ಹುದ್ದೆಗಳು–87

ಅರ್ಜಿಯನ್ನು ಆನ್‌ಲೈನ್ ಮುಖಾಂತರ ಅಂದರೆ ಇಲಾಖೆಯ ವೆಬ್‌ಸೈಟ್ www.ksfesonline.inನಿಂದಅಭ್ಯರ್ಥಿಗಳು ಅರ್ಜಿಗಳನ್ನು ಸಲ್ಲಿಸಬಹುದು.

**7.** ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗವಹಿಸಲು ಎಷ್ಟು ಶುಲ್ಕವನ್ನು ಪಾವತಿಸಬೇಕು ?

ಉ: ಪ.ಜಾ.,ಪ.ಪಂ.ಮತ್ತು ಪ್ರವರ್ಗ–01 ಅಭ್ಯರ್ಥಿಗಳಿಗೆ – 100/– ಗಳು ಮತ್ತು ಸಾಮಾನ್ಯ ವರ್ಗ, 2ಎ,2ಬಿ, 3ಎ ಮತ್ತು 3ಬಿ ಅಭ್ಯರ್ಥಿಗಳಿಗೆ –250/– ಗಳನ್ನು ಪಾವತಿಸಿ ನೇಮಕಾತಿ ಪ್ರಕ್ರಿಯೆಯಲ್ಲಿಭಾಗವಹಿಸಬಹುದಾಗಿರುತ್ತದೆ.

**8.** ಭರ್ತಿ ಮಾಡಿದ ಅರ್ಜಿಗಳನ್ನು ಎಲ್ಲಿ ಸಲ್ಲಿಸಬೇಕಾಗುತ್ತದೆ?

ಉ: ಭರ್ತಿ ಮಾಡಿದ ಅರ್ಜಿಗಳನ್ನು ಅಭ್ಯರ್ಥಿಯು ಆನ್‌ಲೈನ್ www.ksfesonline.inಮುಖಾಂತರ ನಿಗದಿಪಡಿಸಿದಕೊನೆಯ ದಿನಾಂಕ ಅಂದರೆ 05.04.2015 ರ ಸಾಯಂಕಾಲ 6.00 ಗಂಟೆಯೊಳಗೆ ಸಲ್ಲಿಸಬಹುದಾಗಿರುತ್ತದೆ

**9.** ಅರ್ಜಿಗಳನ್ನು ಜೆರಾಕ್ಸ್ ಮಾಡಿ ಅಥವಾ ಅರ್ಜಿಗಳನ್ನು ಟೈಪ್ ಮಾಡಿ ಪ್ರತಿಗಳನ್ನು ಸಲ್ಲಿಸಬಹುದೇ?

ಉ: ಇಲ್ಲ. ಇಲಾಖೆಯು ನಿಗದಿಪಡಿಸುವ ಮೂಲ ಅರ್ಜಿಯನ್ನು ಆನ್‌ಲೈನ್ ಮುಖಾಂತರ ಸಲ್ಲಿಸಿದ ಅರ್ಜಿಯನ್ನುಮಾತ್ರ ಪರಿಗಣಿಸಲಾಗುವುದು. ಜೆರಾಕ್ಸ್ ಮಾಡಿದ ಅಥವಾ ಖುದ್ದಾಗಿ ಮತ್ತು ಅಂಚೆ ಮೂಲಕ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**10.** ಎ) ಯಾವ ರೀತಿಯಲ್ಲಿ ಶುಲ್ಕವನ್ನು ಪಾವತಿಸಬೇಕು?

ಉ: ಆನ್‌ಲೈನ್ ಮೂಲಕ ಸೃಜಿಸಿರುವ ಬ್ಯಾಂಕ್ ಚಲನ್‌ನ್ನು ಡೌನ್‌ಲೋಡ್ ಮಾಡಿರುವ ಚಲನ್ ಸ್ಟೇಟ್ ಬ್ಯಾಂಕ್ಅಫ್ ಮೈಸೂರು ಮತ್ತು ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್‌ನಲ್ಲಿ ಶುಲ್ಕವನ್ನು ಪಾವತಿಸಬಹುದಾಗಿದೆ, ಬೇರಾವುದೇ ಬ್ಯಾಂಕಿನಲ್ಲಿಪಾವತಿಸಲು ಅವಕಾಶವಿರುವುದಿಲ್ಲ. ಬ್ಯಾಂಕ್ ಹುಂಡಿ, ಪೋಸ್ಟಲ್ ಆರ್ಡರ್, ಮನಿಆರ್ಡರ್ ಅಥವಾ ಇನ್ನಾವ್ಯದೇ ಸ್ವರೂಪದಲ್ಲಿ ಶುಲ್ಕವನ್ನು ಪಾವತಿಸತಕ್ಕದ್ದಲ್ಲ ಹಾಗೂ ಅಂತಹ ಅರ್ಜಿಯನ್ನುಪರಿಗಣಿಸಲಾಗುವುದಿಲ್ಲ.

**10.** ಬಿ) ಆನ್‌ಲೈನ್ ಮೂಲಕ ಸಲ್ಲಿಸಿರುವ ಅರ್ಜಿಯನ್ನು ಅಂಶಗಳನ್ನು ಯವುದೇ ಹಂತದಲ್ಲಿ ಬದಲಾವಣೆ ಅರ್ಜಿ ಸಲ್ಲಿಸಬಹುದೇ?

ಉ: ಒಮ್ಮೆ ಅಭ್ಯರ್ಥಿಗಳು ಆನ್‌ಲೈನ್‌ನಲ್ಲಿ ಅರ್ಜಿಸಲ್ಲಿಸದ ನಂತರ ನೀಡಿರುವ ಮಾಹಿತಿಯನ್ನು ಯಾವುದೇಹಂತದಲ್ಲಿ ಬದಲಾವಣೆ ಮಾಡಲು ಅವಕಾಶವಿರುವುದಿಲ್ಲ.

**10.** ಸಿ) ಒಮ್ಮೆ ಪಾವತಿಸಿದ ಅರ್ಜಿ ಶುಲ್ಕವನ್ನು ಹಿಂಪಡೆಯಬಹುದೇ?

ಉ: ಒಮ್ಮೆ ಆನ್‌ಲೈನ್ ಮುಖಾಂತರ ಅರ್ಜಿ ಸಲ್ಲಿಸಿ, ಸೃಜಿಸಿರುವ ಚಲನ್ ಅನ್ನು ಸಂಬಂಧಪಟ್ಟ ಬ್ಯಾಂಕಿನಲ್ಲಿಅರ್ಜಿಯ ಶುಲ್ಕವನ್ನು ಪಾವತಿಸಿದ ನಂತರ ಯಾವುದೇ ಕಾರಣಗಳಿಂದ ಹಣವನ್ನು ಹಿಂದಿರುಗಿಸುವುದಿಲ್ಲ.

**10.** ಡಿ) ಆನ್‌ಲೈನ್ ಮುಖಾಂತರ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದ ನಂತರ ಸಲ್ಲಿಸಿದ ಅರ್ಜಿಗಳು ಮತ್ತು ಪಾವತಿಸಿದ ಶುಲ್ಕವನ್ನು ಪರಿಗಣಿಸಬಹುದೇ?

ಉ: ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದ ನಂತರ ಪಾವತಿಸಿದ ಅರ್ಜಿಯ ಶುಲ್ಕ ಮತ್ತುಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.

**10.** ಇ) ಮೀಸಲಾತಿ ಅಡಿಯಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ತಪ್ಪಾಗಿ ಪ್ರವರ್ಗವನ್ನು ತುಂಬಿರುವ ಅರ್ಜಿಗಳನ್ನುಯಾವ ರೀತಿಯಲ್ಲಿ ಪರಿಗಣಿಸಬಹುದು?

ಉ: ಅಭ್ಯರ್ಥಿಯು ಅರ್ಜಿಯ ಪ್ರವರ್ಗದ ಅಂಕಣವನ್ನು ತಪ್ಪಾಗಿ ನಮೂದಿಸಿದ್ದಲ್ಲಿ ಅದರ ತಿದ್ದುಪಡಿಗೆಅವಕಾಶವಿರುವುದಿಲ್ಲ ಮತ್ತು ಅಂತಹ ಅಭ್ಯರ್ಥಿಗಳನ್ನು ಸಾಮಾನ್ಯ ಅಭ್ಯರ್ಥಿಯೆಂದು ಪರಿಗಣಿಸಲಾಗುವುದು.

**10.** ಎಫ್) ಮೀಸಲಾತಿಯ ಅಡಿಯಲ್ಲಿ ಆಯ್ಕೆ ಬಯಸಿವರು ಅಭ್ಯರ್ಥಿಗಳು ಯಾವ ದಿನಾಂಕದ ಪ್ರಮಾಣಪತ್ರಗಳನ್ನುಮತ್ತು ಯಾವ ನಮೂನೆಯಲ್ಲಿ ಪಡೆದಿಟ್ಟುಕೊಂಡಿರಬೇಕು?

ಉ: ಮೀಸಲಾತಿಯ ಅಡಿಯಲ್ಲಿ ಆಯ್ಕೆಯನ್ನು ಬಯಸುವ ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿಸಲ್ಲಿಸಲುಕೊನೆಯ ದಿನಾಂಕದೊಳಗೆ (ಅಂದರೆ ದಿನಾಂಕ:05–04–2015) ಸಂಬಂಧಪಟ್ಟ ಪ್ರಾಧಿಕಾರದಿಂದ ಅಧಿಸೂಚನೆಯಲ್ಲಿ ನಮೂದಿರುವ ನಿಯಮಗಳನಮೂನೆಯಲ್ಲಿ ಪಡೆದಿಟ್ಟುಕೊಂಡಿರತಕ್ಕದ್ದು. ಅಲ್ಲದೇ, ಸದರಿ ಪ್ರಮಾಣ ಪತ್ರಗಳು ದಿನಾಂಕ:05–04–2015ಕ್ಕೆ ಐದು ವರ್ಷಕ್ಕಿಂತ ಹಳೆಯದಾಗಿರಬಾರದು.

**11.** ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವಾಗ ತಾಂತ್ರಿಕ ದೋಷ ಉಂಟಾದ್ದಲ್ಲಿ ಯಾರನ್ನು ಸಂಪರ್ಕಿಸಬೇಕು?

ಉ: ಆನ್‌ಲೈನ್ ಮೂಲಕ ಅರ್ಜಿ ಭರ್ತಿ ಮಾಡುವ ಸಂದರ್ಭದಲ್ಲಿ ತಾಂತ್ರಿಕ ಅಥವಾ ಬೇರೆ ಸಮಸ್ಯೆಗಳುಎದುರಾದಲ್ಲಿ ನೇಮಕಾತಿ ಸಮಿತಿಯ ಸಹಾಯವಾಣಿ ದೂರವಾಣಿಗೆ ಸಂಖ್ಯೆ:080–22971605/06ಗೆ ಕರೆಮಾಡಿ ಅಗತ್ಯ ಮಾಹಿತಿಯನ್ನು ಪಡೆದು ಅರ್ಜಿ ಸಲ್ಲಿಸಬಹುದಾಗಿದೆ.

**12.** ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗೆ ಒಂದಕ್ಕಿಂತ ಹೆಚ್ಚಿನ ಅರ್ಜಿಯನ್ನು ಸಲ್ಲಿಸಬಹುದೇ?

ಉ: ಇಲ್ಲ. ಒಬ್ಬ ಅಭ್ಯರ್ಥಿಯು ಒಂದಕ್ಕಿಂತ ಹೆಚ್ಚಿನ ಅರ್ಜಿಯನ್ನು ಸಲ್ಲಿಸಬಾರದು. ಹಾಗೆಸಲ್ಲಿಸಿದಲ್ಲಿ, ಒಂದು ಅರ್ಜಿಯನ್ನು ಮಾತ್ರ ಪರಿಗಣಿಸಿ, ಉಳಿದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**13.** ನಾನು ಅರ್ಹನಿರುವ ಬಗ್ಗೆ ಹೇಗೆ ತಿಳಿದುಕೊಳ್ಳುವುದು?

ಉ: ಆನ್‌ಲೈನ್ ಮುಖಾಂತರ ಅರ್ಜಿ ಸಲ್ಲಿಸುವಾಗ ನೀವು ಅರ್ಹನಿರುವ ಬಗ್ಗೆ ಗಣಕಯಂತ್ರವೇ ತಿಳಿಸುತ್ತದೆ.ಅನರ್ಹನಾಗಿದ್ದರೆ ಅರ್ಜಿಯನ್ನು ಸಲ್ಲಿಸಲು ಸಾಧ್ಯವಾಗುವುದಿಲ್ಲ.

**14.** ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಕರೆಪತ್ರವನ್ನು ಪಡೆಯುವ ಬಗೆ?

ಉ: ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಕರೆಪತ್ರವನ್ನು ಅಧಿಕೃತ ವೆಬ್‌ಸೈಟ್ (www.ksfesonline.in) ಮುಖಾಂತರ ಆನ್‌ಲೈನ್‌ನಲ್ಲಿಪಡೆಯಬಹುದಾಗಿದೆ.ಪ್ರತ್ಯೇಕವಾಗಿ ಕರೆ ಪತ್ರವನ್ನು ಕಳುಹಿಸಲಾಗುವುದಿಲ್ಲ.

**15.** ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಯನ್ನು ಯಾರು ನಡೆಸುತ್ತಾರೆ?

ಉ: ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಯನ್ನು ಡಿಜಿಪಿ ಮತ್ತು ಐಜಿಪಿ ರವರಿಂದ ನಾಮನಿರ್ದೇಶಿಸಲ್ಪಟ್ಟನೇಮಕಾತಿ ಸಮಿತಿಯುಪ್ರತಿ ಪಡೆಯ ವ್ಯಾಪ್ತಿಯಲ್ಲಿ ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಯನ್ನುನಡೆಸಲಾಗುವುದು.

**16.** ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಯಲ್ಲಿ ಅನುತ್ತೀರ್ಣರಾದವರು ಮೇಲ್ಮನವಿ ಸಲ್ಲಿಸಲುಅವಕಾಶವಿದೆಯೇ?

ಉ: ಇಲ್ಲ. ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಯಲ್ಲಿ ಅನುತ್ತೀರ್ಣರಾದ ಅಭ್ಯರ್ಥಿಗಳು ಮೇಲ್ಮನವಿ ಸಲ್ಲಿಸಲುಅವಕಾಶವಿಲ್ಲ. ನೇಮಕಾತಿ ಸಮಿತಿಯು ನಡೆಸುವ ಪರೀಕ್ಷೆಯೇ ಅಂತಿಮವಾಗಿದ್ದು, ಇತರೆ ವೈದ್ಯಾಧಿಕಾರಿಗಳುನೀಡುವ ಪ್ರಮಾಣ ಪತ್ರಗಳನ್ನು ಸಹ ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

**17.** ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಅಂಕಗಳನ್ನು ನೀಡಲಾಗುತ್ತದೆಯೇ?

ಉ: ಇಲ್ಲ. ಈ ಪರೀಕ್ಷೆಯನ್ನು ಕೇವಲ ಮುಂದಿನ ಪ್ರಕ್ರಿಯೆಗೆ (ಅಂದರೆ ಲಿಖಿತ ಪರೀಕ್ಷೆಗೆ) ಭಾಗವಹಿಸಲು ಅರ್ಹತೆಯನ್ನು ಪಡೆಯಲು ಮಾತ್ರನಡೆಸಲಾಗುವುದು.

**18.** ವೈದ್ಯಕೀಯ ಪರೀಕ್ಷೆಯಲ್ಲಿ ಅನುತ್ತೀರ್ಣನಾದರೆ ಇತರೆ ವೈದ್ಯರಿಂದ ಪ್ರಮಾಣ ಪತ್ರ ಪಡೆದು ನೀಡಬಹುದೇ?

ಉ: ಇಲ್ಲ. ಇತರೆ ಯಾವುದೇ ವೈದ್ಯರಿಂದ ಪಡೆದ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ನೇಮಕಾತಿಸಮಿತಿಯಿಂದ ನಿರ್ದೇಶಿಸಲ್ಪಟ್ಟಿರುವ ಅಧಿಕಾರಿಗಳು ತಪಾಸಣೆಯ ನಂತರ ನೀಡಲಾಗುವ ಪ್ರಮಾಣ ಪತ್ರವನ್ನುಮಾತ್ರ ಪರಿಗಣಿಸಲಾಗುವುದು ಹಾಗೂ ವೈದ್ಯಕೀಯ ಮಂಡಳಿಯ ಮುಂದೆ ವೈದ್ಯಕೀಯ ಪರೀಕ್ಷೆಯನ್ನುನಡೆಸಲಾಗುತ್ತಿದ್ದು, ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರವೇ ಅಂತಿಮವಾಗಿರುತ್ತದೆ.

**19.** ನಿಗದಿಗೊಳಿಸಿದ ದೈಹಿಕ ಸಾಮರ್ಥ್ಯ ಮತ್ತು ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅನುತ್ತೀರ್ಣರಾದರೆ ಲಿಖಿತಪರೀಕ್ಷೆಗೆ ಅರ್ಹರೇ?

ಉ: ಅಭ್ಯರ್ಥಿಯೂ ದೈಹಿಕ ಸಾಮರ್ಥ್ಯ ಮತ್ತು ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅನುತ್ತೀರ್ಣರಾದರೆ (ಅಂದರೆ 5 ದೈಹಿಕ ಪರೀಕ್ಷೆಯಲ್ಲಿ ಮೂರಕ್ಕಿಂತ ಕಡಿಮೆ ದೈಹಿಕ ಪರೀಕ್ಷೆಯಲ್ಲಿ ಅನುತ್ತೀರ್ಣರಾದರೆ) ಲಿಖಿತ ಪರೀಕ್ಷೆಗೆಅನರ್ಹನೆಂದು ಪರಿಗಣಿಸಿ, ಮುಂದೆ ನಡೆಯುವ ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗವಹಿಸುವಂತಿಲ್ಲ.

**20.** BMI ಎಂದರೇನು?

ಉ: BMIಎಂದರೆ Body Mass Index Machine ಇದರಿಂದ ದೇಹದಾರ್ಢ್ಯತೆ ಪರೀಕ್ಷೆಯ ಎತ್ತರ ಹಾಗೂತೂಕವನ್ನು ಅಳತೆ ಮಾಡಲಾಗುವುದು.

**21.** ಲಿಖಿತ ಪರೀಕ್ಷೆಗೆ ಅರ್ಹನಾಗಲು ಹೊಂದಿರಬೇಕಾದ ಅರ್ಹತೆಗಳೇನು? ಲಿಖಿತ ಪರೀಕ್ಷೆಗೆ ತರಬೇಕಾದದಾಖಲಾತಿಗಳೇನು?

ಉ: ದೈಹಿಕ ಸಾಮರ್ಥ್ಯ ಪರೀಕ್ಷೆಗಳನ್ನು ನಿಗದಿಪಡಿಸಿರುವ ಸಮಿತಿಯುನಡೆಸುವ 5 ದೈಹಿಕ ಪರೀಕ್ಷೆಗಳಲ್ಲಿ ಕೊನೆಯಪಕ್ಷ 3 ದೈಹಿಕ ಪರೀಕ್ಷೆಗಳಲ್ಲಿ ಉತ್ತೀರ್ಣರಾದಲ್ಲಿ ಮಾತ್ರ ಲಿಖಿತ ಪರೀಕ್ಷೆಗೆ ಅರ್ಹತೆಯನ್ನು ಪಡೆಯುತ್ತಾರೆ ಮತ್ತು ಸದರಿ ಪರೀಕ್ಷೆಗೆಹಾಜರಾಗಲು 1) ಲಿಖಿತ ಪರೀಕ್ಷೆಯ ಮೂಲ ಕರೆಪತ್ರ. 2) ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯಪರೀಕ್ಷೆಯ ಮೂಲ ಫಲಿತಾಂಶದಹಾಳೆ 3) ಮೂಲ ಗುರುತಿನ ಚೀಟಿಮತ್ತು 4) ಆನ್‌ಲೈನ್ ಅರ್ಜಿಯ ಜೆರಾಕ್ಸ್ ಪ್ರತಿಯನ್ನು ತರತಕ್ಕದ್ದು, ತಪ್ಪಿದ್ದಲ್ಲಿ ಲಿಖಿತ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡಲಾಗುವುದಿಲ್ಲ.

**22.** ದೈಹಿಕ ಪರೀಕ್ಷೆಗೆ ಅಂಕಗಳನ್ನು ನೀಡಲಾಗುವುದೇ?

ಉ: ದೈಹಿಕ ಪರೀಕ್ಷೆಗೆ ಅಂಕಗಳನ್ನು ನೀಡಲಾಗುವುದಿಲ್ಲ. ಇದು ಕೇವಲ ಲಿಖಿತ ಪರೀಕ್ಷೆಯ ಅರ್ಹತೆಗಾಗಿ ನಡೆಸುವ ಪರೀಕ್ಷೆಯಾಗುತ್ತದೆ.

**23.** ಲಿಖಿತ ಪರೀಕ್ಷೆಯ ಪ್ರಶ್ನೆ ಪತ್ರಿಕೆಯು ಯಾವ ಭಾಷೆಯಲ್ಲಿ ಇರುತ್ತದೆ ?

ಉ: ಲಿಖಿತ ಪರೀಕ್ಷೆಯ ಪ್ರಶ್ನೆ ಪತ್ರಿಕೆಯು ಕನ್ನಡ / ಆಂಗ್ಲ ಭಾಷೆಯಲ್ಲಿ ಇರುತ್ತದೆ.

**24.** ಲಿಖಿತ ಪರೀಕ್ಷೆಯನ್ನು ಯಾವ ಭಾಷೆಯಲ್ಲಿ ಉತ್ತರಿಸಬಹುದು?

ಉ: ಲಿಖಿತ ಪರೀಕ್ಷೆಯನ್ನು ಅಭ್ಯರ್ಥಿಗಳು ಓ.ಎಂ.ಆರ್. ಉತ್ತರ ಪತ್ರಿಕೆಯಲ್ಲಿ ಸರಿಯಾದ ಉತ್ತರಗಳನ್ನುಗುರುತಿಸಬೇಕಾಗುತ್ತದೆ.

**25.** ಇಲಾಖೆಯು ನಡೆಸುವ ಪರೀಕ್ಷೆಗಳಿಗೆ ಹಾಜರಾದಲ್ಲಿ ಪರೀಕ್ಷಾ ಭತ್ಯೆ ನೀಡಲಾಗುತ್ತದೆಯೇ?ಲಿಖಿತ ಪರೀಕ್ಷಾಕೇಂದ್ರದ ಕೊಠಡಿಯಲ್ಲಿ ಹಾಜರಾಗುವ ಸಮಯ?

ಉ: ಇಲ್ಲ. ಇಲಾಖೆಯು ನಡೆಸುವ ದೇಹದಾರ್ಢ್ಯತೆ ಪರೀಕ್ಷೆ, ಲಿಖಿತ ಪರೀಕ್ಷೆ ಮತ್ತು ವೈದ್ಯಕೀಯಪರೀಕ್ಷೆಗಳಿಗೆ ಯಾವುದೇ ತರಹದ ಪರೀಕ್ಷಾ ಭತ್ಯೆ ನೀಡಲಾಗುವುದಿಲ್ಲ. ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆನಿಗದಿಪಡಿಸಿರುವ ಸಮಯಕ್ಕಿಂತ ಒಂದು ಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಯಲ್ಲಿ ಹಾಜರಿತಕ್ಕದ್ದು, ಆಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಉತ್ತರ ಪತ್ರಿಕೆಯಲ್ಲಿ ಅರ್ಜಿ ಸಂಖ್ಯೆ, ನೊಂದಣಿ ಸಂಖ್ಯೆ, ಪ್ರಶ್ನೆ ಪತ್ರಿಕೆಶ್ರೇಣಿ ಇತ್ಯಾದಿಗಳನ್ನು ಭರ್ತಿ ಮಾಡುವ ಬಗ್ಗೆ ಕೆಲವು ಮಾರ್ಗಸೂಚನೆಗಳನ್ನು ನೀಡುವರು.

**26.** ಲಿಖಿತ ಪರೀಕ್ಷೆ ಕೊಠಡಿಯಲ್ಲಿ ಮೊಬೈಲ್ ಫೋನನ್ನು ಬಳಸಬಹುದೇ?

ಉ: ಇಲ್ಲ. ಲಿಖಿತ ಪರೀಕ್ಷೆ ಕೊಠಡಿಯಲ್ಲಿ ಮೊಬೈಲ್ ಫೋನ್, ಪೇಜರ್, ಕ್ಯಾಲ್ಕುಲೇಟರ್, ಲ್ಯಾಪ್‌ಟಾಪ್‌ಗಳಬಳಕೆಯನ್ನು ಕಟ್ಟುನಿಟ್ಟಾಗಿ ನಿಷೇಧಿಸಿದೆ. ಅಭ್ಯರ್ಥಿಯ ಪರೀಕ್ಷಗಳಲ್ಲಿ ಅನುಚಿತವಾಗಿ ವರ್ತಿಸಿದರೆ ಅಥವಾನಕಲು ಮಾಡಿರುವು ಕಂಡು ಬಂದರೆ ಅಥವಾ ನಕಲು ಮಾಡುವ ಸಾಮಗ್ರಿಗಳನ್ನು ಹೊಂದಿದ್ದರೆ, ಅಂತಹಅಭ್ಯರ್ಥಿಗಳನ್ನು 3 ವರ್ಷಗಳ ಕಾಲ ಡಿಬಾರ್ ಮಾಡಲಾಗುವುದು.

**27.** ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಯ ಪ್ರಶ್ನೆ ಪತ್ರಿಕೆಗೆ ನಿಗದಿಪಡಿಸಿರುವ ಗರಿಷ್ಠ ಅಂಕಗಳೆಷ್ಟು?

ಉ: ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಯ ಲಿಖಿತ ಪರೀಕ್ಷೆಯಲ್ಲಿ 100ಅಂಕಗಳ ಕನ್ನಡ ಅಥವಾ ಆಂಗ್ಲ ಭಾಷೆಯಲ್ಲಿ ಎರಡು ಪ್ರಶ್ನೆ ಪತ್ರಿಕೆ ಇರುತ್ತದೆ. ಇದು ವಸ್ತುನಿಷ್ಠ (ಆಬ್ಜೆಕ್ಟೀವ್)ಮಾದರಿಯದಾಗಿದ್ದು, ಬಹುವಿಧ ಆಯ್ಕೆ (Multiple choice) ಉತ್ತರಗಳ ಲಿಖಿತ ಪರೀಕ್ಷೆ ಇರುತ್ತದೆ.

**ಪ್ರಶ್ನೆ ಪತ್ರಿಕೆ–1 ಸಾಮಾನ್ಯ ಜ್ಞಾನ (ಆಂಗ್ಲ ಅಥವಾ ಕನ್ನಡ) ಗರಿಷ್ಠ ಅಂಕಗಳು 100**

**ಪ್ರಶ್ನೆ ಪತ್ರಿಕೆ–2 ವಿಜ್ಞಾನ ಮತ್ತು ಆಪ್ಟಿಟ್ಯೂಡ್‌ಪರೀಕ್ಷೆ (Science & Aptitude Test) (ಆಂಗ್ಲ ಅಥವಾ ಕನ್ನಡ) ಗರಿಷ್ಠ ಅಂಕಗಳು 100**

**(ಪ್ರಶ್ನೆ ಪತ್ರಿಕೆ–1 ಮತ್ತು ಪ್ರಶ್ನೆ ಪತ್ರಿಕೆ–2 Objective type ಇರುವುದು ಹಾಗೂ ಪರೀಕ್ಷೆಗಳ ಕಾಲಾವಧಿ ಪ್ರತಿಯೊಂದು ಪತ್ರಿಕೆಗೆ 1 ಗಂಟೆ 30 ನಿಮಿಷಗಳು ಮಾತ್ರ.)**

27. ಮೌಖಿಕ ಪರೀಕ್ಷೆಗೆ ಅರ್ಹನಾಗಲು ಹೊಂದಿರಬೇಕಾದ ಅರ್ಹತೆಗಳೇನು?

ಉ: ಅಭ್ಯರ್ಥಿಗಳು ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ತಾತ್ಕಾಲಿಕ ಅರ್ಹತಾ ಪಟ್ಟಿಯನ್ನು ತಯಾರಿಸಿ, ಆ ಪೈಕಿ ಅಧಿಸೂಚಿತ ಖಾಲಿ ಹುದ್ದೆಗಳಲ್ಲಿ ವರ್ಗಾವಾರು 1:3 ಅನುಪಾತದಲ್ಲಿ ಮೌಖಿಕ ಪರೀಕ್ಷೆಗೆ ಅರ್ಹರಾಗುತ್ತಾರೆ.

28. ಮೌಖಿಕ ಪರೀಕ್ಷೆಯನ್ನು ಎಷ್ಟು ಅಂಕಗಳಿಗೆ ನಡೆಸಲಾಗುವುದು?

ಉ: ಮೌಖಿಕ ಪರೀಕ್ಷೆಯನ್ನು 10 ಅಂಕಗಳಿಗೆ ನಡೆಸಲಾಗುವುದು.

29. ಪ್ರಶ್ನೆ ಪತ್ರಿಕೆಯಲ್ಲಿ ಮುದ್ರಣ ದೋಷವಿದ್ದಲ್ಲಿ ಅಥವಾ ಪ್ರಶ್ನೆ ಪತ್ರಿಕೆಯ ಪ್ರಶ್ನೆಯ ಬಗ್ಗೆ ಆಕ್ಷೇಪಣೆ ಇದ್ದಲ್ಲಿ,ಅದನ್ನು ಪರೀಕ್ಷಾ ಕೊಠಡಿಯ ಪರಿವೀಕ್ಷಕರ ಗಮನಕ್ಕೆ ತರಬಹುದೇ?

ಉ: ಹೌದು. ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಆಯಾ ಪರೀಕ್ಷಾ ದಿನವೇ ಸಂಬಂಧಿತ ಮೇಲ್ವಿಚಾರಕರಮುಖಾಂತರ ಅವರ ಹೆಸರು, ವಿಳಾಸ, ನೋಂದಣಿ ಸಂಖ್ಯೆ, ಇತ್ಯಾದಿಗಳನ್ನು ನಮೂದಿಸಿರುವ ಲಿಖಿತಮನವಿಯನ್ನು ನೇಮಕಾತಿ ಸಮಿತಿಗೆ ಸ್ವೀಕೃತಿ ಪಡೆಯಬೇಕು.ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ. ಹೆಚ್ಚಿನ ಮಾಹಿತಿಗಾಗಿ ಅಧಿಸೂಚನೆಯನ್ನುನೋಡುವುದು.

30. ಉತ್ತರ ಪತ್ರಿಕೆಯನ್ನು ಯಾರು ಮೌಲ್ಯ ಮಾಪನ ಮಾಡುತ್ತಾರೆ ?

ಉ: ನೇಮಕಾತಿ ಸಮಿತಿಯು ಮೌಲ್ಯಮಾಪನದ ಬಗ್ಗೆ ನಿರ್ಧಾರ ತೆಗೆದುಕೊಳ್ಳುತ್ತದೆ.ಉತ್ತರ ಪತ್ರಿಕೆಯ ಓಎಮ್‌ಆರ್ (Optical Mark Recognition) ಕಾರ್ಬನ್‌ಲೇಸ್ ಪತ್ರಿಕೆಯಾಗಿದ್ದುಇದನ್ನು ಗಣಕಯಂತ್ರದಲ್ಲಿ ಮೌಲ್ಯ ಮಾಪನ ಮಾಡಲಾಗುವುದು.

31. ಲಿಖಿತ ಪರೀಕ್ಷೆಗೆ ಕನಿಷ್ಠ ಅಂಕಗಳನ್ನು ನಿಗದಿಪಡಿಸಲಾಗಿದೆಯೇ?

ಉ: ಇಲ್ಲ. ಯಾವುದೇ ಕನಿಷ್ಠ ಅಂಕಗಳನ್ನು ನಿಗದಿಪಡಿಸಿರುವುದಿಲ್ಲ.

32. ಯಾವ ಬಣ್ಣದ ಪೆನ್ನಿನಿಂದ ಉತ್ತರ ಪತ್ರಿಕೆಯನ್ನು ಭರ್ತಿ ಮಾಡಬೇಕು ?

ಉ: ಇದಕ್ಕೆ ಸಂಬಂಧಿಸಿದಂತೆ, ಕಪ್ಪು ಅಥವಾ ನೀಲಿ ಬಾಲ್ ಪಾಯಿಂಟ್ ಪೆನ್ ಉಪಯೋಗಿಸುವುದು.

33. ಉತ್ತರ ಪತ್ರಿಕೆಯ ಮರು ಮೌಲ್ಯಮಾಪನ ಮಾಡುವ ಅವಕಾಶವಿದೆಯೇ ?

ಉ: ಇಲ್ಲ. ವೃಂದ ಮತ್ತು ನೇಮಕಾತಿ ನಿಯಮದಡಿಯಲ್ಲಿ ಉತ್ತರ ಪತ್ರಿಕೆಯ ಮರು ಮೌಲ್ಯಮಾಪನ ಮಾಡುವಅವಕಾಶವಿರುವುದಿಲ್ಲ. ಪರೀಕ್ಷೆಯು ಸ್ಪರ್ಧಾತ್ಮಕ ಪರೀಕ್ಷೆಯಾಗಿರುವುದರಿಂದ ಮರು ಮೌಲ್ಯಪಾನಕ್ಕೆ ಅವಕಾಶನೀಡಿರುವುದಿಲ್ಲ.

34. ತಾತ್ಕಲಿಕ ಆಯ್ಕೆ ಪಟ್ಟಿಯನ್ನು ಹೇಗೆ ತಯಾರಿಸಲಾಗುತ್ತದೆ ?

ಉ: ಅಭ್ಯರ್ಥಿಗಳು ಈ ವಸ್ತುನಿಷ್ಠ ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಮತ್ತು ಮೌಖಿಕ (Viva voice) ಪರೀಕ್ಷೆಯಲ್ಲಿ ಪಡೆದ ಶೇಕಡಾ ಅಂಕಗಳನ್ನೂ ಕೂಡಿಸಿ ಅದರ ಆಧಾರದ ಮೇಲೆ ಅರ್ಹತಾಪಟ್ಟಿಯನ್ನು ತಯಾರಿಸಲಾಗುವುದು. ಈ ಅರ್ಹತಾ ಪಟ್ಟಿಯಿಂದ ಪ್ರತಿ ವರ್ಗದಲ್ಲಿ ಅಧಿಸೂಚಿತ ಖಾಲಿ ಇರುವಹುದ್ದೆಗಳಿಗೆ ಅನುಗುಣವಾಗಿ ಅರ್ಹ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು 1:1 ರ ಪ್ರಮಾಣದಲ್ಲಿಚಾಲ್ತಿಯಲ್ಲಿರುವ ಸರ್ಕಾರದ ಆದೇಶ / ನಿಯಮಾನುಸಾರ ತಯಾರಿಸಲಾಗುವುದು. (ಹೆಚ್ಚಿನ ಮಾಹಿತಿಗಾಗಿನೇಮಕಾತಿ ಅಧಿಸೂಚನೆಯನ್ನು ನೋಡುವುದು).

35. ವೈದ್ಯಕೀಯ ಪರೀಕ್ಷೆ ಎಂದರೇನು? ಇದರಲ್ಲಿ ಯಾವ ರೀತಿಯ ವೈದ್ಯಕೀಯ ಪರೀಕ್ಷೆಯನ್ನು ನಡೆಸಲಾಗುತ್ತದೆ?

ಉ: ತಾತ್ಕಾಲಿಕವಾಗಿ ಆಯ್ಕೆಯಾದ ಅಭ್ಯರ್ಥಿಗಳನ್ನು ಒಂದು ವೈದ್ಯಕೀಯ ಮಂಡಳಿಯ ಮುಂದೆ ಹಾಜರುಪಡಿಸಿವೈದ್ಯಕೀಯ ಪರೀಕ್ಷೆಯನ್ನು ನಡೆಸಲಾಗುತ್ತದೆ. ಇದರಲ್ಲಿ ಕಣ್ಣಿನ ಪರೀಕ್ಷೆ, ಶ್ರವಣ ಶಕ್ತಿ, ಅಪಧಮನಿ ಊತ,ಮಾತಿನಲ್ಲಿ ಅಡಚಣೆ ಮತ್ತು ಕ್ಷ-ಕಿರಣದ ಪರೀಕ್ಷೆಗಳನ್ನು ನಡೆಸಲಾಗುತ್ತದೆ.(ಹೆಚ್ಚಿನ ಮಾಹಿತಿಗಾಗಿ ನೇಮಕಾತಿ ಅಧಿಸೂಚನೆಯನ್ನು ನೋಡುವುದು).

36. ಮೂಲ ದಾಖಲಾತಿ ಎಂದರೇನು ?

ಉ: ಮೂಲ ದಾಖಲಾತಿ ಎಂದರೆ ಯಾವ ಹುದ್ದೆಗೆ ಸೇರಲು ಬಯಸುತ್ತಾರೋ ಆ ಹುದ್ದೆಗೆ ನಿಗದಿಪಡಿಸಿದವಿದ್ಯಾರ್ಹತೆಯ ಅಂಕಪಟ್ಟಿ, ಹುಟ್ಟಿದ ದಿನಾಂಕದ ಅಂಕಪಟ್ಟಿ ಹಾಗೂ ಮೀಸಲಾತಿಗಳನ್ನು ಕೋರಿದ್ದಲ್ಲಿ ಅಂತಹಪ್ರಮಾಣ ಪತ್ರದ ಮೂಲ ಪತ್ರಗಳು.

37. ಮೂಲ ದಾಖಲಾತಿಗಳನ್ನು ಯಾವಾಗ ಹಾಜರುಪಡಿಸಬೇಕು ?

ಉ: ನೇಮಕಾತಿ ಪ್ರಾಧಿಕಾರವು ಯಾವ ಹಂತದಲ್ಲಿಯಾದರೂ ಹಾಜರುಪಡಿಸಲು ಸೂಚಿಸಬಹುದು. ಅಭ್ಯರ್ಥಿಯುಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಅಂದರೆ 05.04.2015 ರೊಳಗೆಸಿಂಧುವಾಗಿರುವಂತೆ ಮೂಲ ದಾಖಲಾತಿಗಳನ್ನು ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಹಾಜರುಪಡಿಸಲುಸೂಚಿಸಿದಾಗ ಹಾಜರುಪಡಿಸತಕ್ಕದ್ದು.

38. ಮೂಲ ತರಬೇತಿ ಎಷ್ಟು ತಿಂಗಳಿರುತ್ತವೆ ?

ಉ: ನೇಮಕಾತಿ ಹೊಂದಿದ ಅಭ್ಯರ್ಥಿಗಳು ಇಲಾಖೆಯು ತೀರ್ಮಾನಿಸಿದ ತರಬೇತಿ ಕೇಂದ್ರದಲ್ಲಿ 6 ತಿಂಗಳ ತರಬೇತಿಯನ್ನು ಪಡೆಯಬೇಕಾಗಿದ್ದು, ತರಬೇತಿಯ ಕೊನೆಯಲ್ಲಿ ನಿಗದಿತ ಪರೀಕ್ಷೆಗಳಲ್ಲಿಉತ್ತೀರ್ಣರಾಗಬೇಕು.ನಂತರ 6 ತಿಂಗಳು ಕಾಲ ಆಡಳಿತಾತ್ಮಕ ತರಬೇತಿಯನ್ನು ಇಲಾಖೆಯು ನಿಯೋಜಿಸಿದ ಠಾಣೆ ಪೂರ್ಣಗೊಳಿಸಿ ಕೊನೆಯಲ್ಲಿ ಇಲಾಖೆ ನಡೆಸುವ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

(ಹೆಚ್ಚಿನ ಮಾಹಿತಿಗಾಗಿ ನೇಮಕಾತಿ ಅಧಿಸೂಚನೆಯನ್ನು ನೋಡುವುದು).

39. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, 2ಎ, 2ಬಿ, 3ಎ ಮತ್ತು 3ಬಿ ಅಭ್ಯರ್ಥಿಗಳು ಯಾವ ಜಾತಿಪ್ರಮಾಣ ಪತ್ರದ ಫಾರಂನ್ನು ಹಾಜರಪಡಿಸಬೇಕು ?

ಉ: ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಸಕ್ಷಮ ಪ್ರಧಿಕಾರದಿಂದ ಸಹಿ ಮತ್ತು ಮೇಲು ರುಜು ಮಾಡಿಸಿ ಮತ್ತು ಮೊಹರಿನೊಂದಿಗೆ ಈ ಕೆಳಕಂಡ ನಮೂನೆಗಳಲ್ಲಿ ಪ್ರಮಾಣ ಪತ್ರಗಳನ್ನುಮಾಡಿಸಿರಬೇಕು.

ಎ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ/ಬುಡಕಟ್ಟು : ನಮೂನೆ-ಡಿ

ಬಿ) ಪ್ರವರ್ಗ -1 : ನಮೂನೆ-ಇ

ಸಿ) ಪ್ರವರ್ಗ- 2ಎ, 2ಬಿ, 3ಎ, 3ಬಿ : ನಮೂನೆ -ಎಫ್

ಇವುಗಳ ಪ್ರತಿಯನ್ನು ಮಾಹಿತಿ ಸೂಚಿಯಲ್ಲಿ ಮಾಹಿತಿಗಾಗಿ ಲಗತ್ತಿಸಿದೆ.

40. ನೇಮಕಾತಿಯಲ್ಲಿ ವಿವಿಧ ಜಾತಿ ಮತ್ತು ವರ್ಗಗಳಿಗೆ ಎಷ್ಟು ಮೀಸಲಾತಿಯನ್ನು ನೀಡಲಾಗುತ್ತದೆ ?

ಉ: ಸಾಮಾನ್ಯ ವರ್ಗ – 50%

ಪರಿಶಿಷ್ಟ ಜಾತಿ – 15%

ಪರಿಶಿಷ್ಟ ಪಂಗಡ – 03%

ಪ್ರವರ್ಗ- 1 – 04%

ಪ್ರವರ್ಗ- 2ಎ – 15%

ಪ್ರವರ್ಗ- 2ಬಿ – 04%

ಪ್ರವರ್ಗ- 3ಎ – 04%

ಪ್ರವರ್ಗ- 3ಬಿ – 05%

(ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ/08/ಸೆಹಿಮ/95, ದಿನಾಂಕ: 20.06.1995 ರಲ್ಲಿರುವಂತೆ)

41. ಗ್ರಾಮೀಣ ಅಭ್ಯರ್ಥಿ ಎಂದರೇನು ? ಯಾರಿಂದ ಮತ್ತು ಎಂದು ಪಡೆದಿರಬೇಕು?

ಉ: 1ನೇ ತರಗತಿಯಿಂದ 10ನೇ ತರಗತಿಯವರೆಗೆ ನಿರಂತರವಾಗಿ ಗ್ರಾಮೀಣ ಪ್ರದೇಶದಲ್ಲಿ ವ್ಯಾಸಂಗ ಮಾಡಿರುವಅಭ್ಯರ್ಥಿಗಳಿಗೆ ಗ್ರಾಮೀಣ ಅಭ್ಯರ್ಥಿ ಎನ್ನುತ್ತಾರೆ.ಗ್ರಾಮೀಣ ಮೀಸಲಾತಿ ಪ್ರಮಾಣಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದುಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿರಬೇಕು ಹಾಗು ಅರ್ಜಿಯನ್ನು ಸಲ್ಲಸಲುನಿಗಧಿಪಡಿಸಿರುವ ಕೊನೆಯ ದಿನಾಂಕದ ಒಳಗೆ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿರತಕ್ಕದ್ದು.

42. ಕನ್ನಡ ಮಾಧ್ಯಮ ಅಭ್ಯರ್ಥಿ ಎಂದರೇನು ? ಯಾರಿಂದ ಮತ್ತು ಎಂದು ಪಡೆದಿರಬೇಕು?

ಉ: 1ನೇ ತರಗತಿಯಿಂದ 10ನೇ ತರಗತಿಯವರೆಗೆ ನಿರಂತರವಾಗಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವಅಭ್ಯರ್ಥಿಗಳಿಗೆ ಕನ್ನಡ ಮಾಧ್ಯಮ ಅಭ್ಯರ್ಥಿ ಎನ್ನುತ್ತಾರೆ.ಕನ್ನಡ ಮೀಸಲಾತಿ ಪ್ರಮಾಣಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದುಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿರಬೇಕು ಹಾಗು ಅರ್ಜಿಯನ್ನು ಸಲ್ಲಸಲುನಿಗಧಿಪಡಿಸಿರುವ ಕೊನೆಯ ದಿನಾಂಕದ ಒಳಗೆ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿರತಕ್ಕದ್ದು.

43. ಮಾಜಿ ಸೈನಿಕ ಅಭ್ಯರ್ಥಿ ಎಂದರೇನು ?

ಉ: ಭೂಸೇನೆ, ವಾಯು ಸೇನೆ, ನೌಕಾ ಸೇನೆಯಲ್ಲಿ ಸೇವೆ ಸಲ್ಲಿಸಿ ಸೈನ್ಯ ವಿಯೋಜನೆ, ಸೇವೆಯಿಂದ ತೆಗೆದುಹಾಕಿದಹಾಗೂ ಸೇವಾ ನಿವೃತ್ತಿ ಹೊಂದಿರುವ ಯೋಧರನ್ನು ಮಾಜಿ ಸೈನಿಕ ಅಭ್ಯರ್ಥಿ ಎನ್ನುತ್ತಾರೆ.

44. ಯೋಜನಾ ನಿರಾಶ್ರಿತ ಅಭ್ಯರ್ಥಿ ಎಂದರೇನು ? ಯಾರಿಂದ ಮತ್ತು ಎಂದು ಪಡೆದಿರಬೇಕು?

ಉ: ಸರ್ಕಾರದ ಯೋಜನೆಗಳಿಂದ ತಾವು ಅವಲಂಬಿತರಾಗಿದ್ದ ಕೃಷಿ ಭೂಮಿ, ಮನೆಗಳನ್ನು ಕಳೆದುಕೊಂಡಅಭ್ಯರ್ಥಿಗಳನ್ನು ಯೋಜನಾ ನಿರಾಶ್ರಿತ ಅಭ್ಯರ್ಥಿ ಎನ್ನುತ್ತಾರೆ. ಪ್ರಮಾಣ ಪತ್ರವನ್ನು ನಿಗದಿ ಪಡಿಸಿರುವನಮೂನೆಯಲ್ಲಿ ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

45. ಗ್ರಾಮೀಣ ಅಭ್ಯರ್ಥಿಗಳಿಗೆ ಶೇಕಡ ಮೀಸಲಾತಿ ಎಷ್ಟು ನೀಡಲಾಗಿದೆ ?

ಉ: ಗ್ರಾಮೀಣ ಅಭ್ಯರ್ಥಿಗಳಿಗೆ 25% ಮೀಸಲಾತಿ ನೀಡಲಾಗಿದೆ. (ಸರ್ಕಾರದ ಆದೇಶಸಂಖ್ಯೆ.ಸಿಆಸುಇ/53/ಸೆನೆನಿ/2007, ದಿನಾಂಕ: 04.01.2008ರ ಪ್ರಕಾರ)

46. ಕನ್ನಡ ಮಾಧ್ಯಮ ಅಭ್ಯರ್ಥಿಗಳಿಗೆ ಶೇಕಡ ಮೀಸಲಾತಿ ಎಷ್ಟು ನೀಡಲಾಗಿದೆ ?

ಉ: ಕನ್ನಡ ಮಾಧ್ಯಮ ಅಭ್ಯರ್ಥಿಗಳಿಗೆ 5% ಮೀಸಲಾತಿ ನೀಡಲಾಗಿದೆ. (ಸರ್ಕಾರದ ಆದೇಶಸಂಖ್ಯೆ.ಸಿಆಸುಇ/53/ಸೆನೆನಿ/2007, ದಿನಾಂಕ: 04.01.2008ರ ಪ್ರಕಾರ)

47. ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳಿಗೆ ಶೇಕಡ ಮೀಸಲಾತಿ ಎಷ್ಟು ನೀಡಲಾಗಿದೆ ?

ಉ: ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳಿಗೆ 5% ಮೀಸಲಾತಿ ನೀಡಲಾಗಿದೆ. (ಸರ್ಕಾರದಆದೇಶ ಸಂಖ್ಯೆ.ಸಿಆಸುಇ/53/ಸೆನೆನಿ/2007, ದಿನಾಂಕ: 04.01.2008ರ ಪ್ರಕಾರ)

48. ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಶೇಕಡ ಮೀಸಲಾತಿ ಎಷ್ಟು ನೀಡಲಾಗಿದೆ ?

ಉ: ಮಾಜಿ ಸೈನಿಕ ಅಭ್ಯರ್ಥಿಗಳಿಗೆ 10% ಮೀಸಲಾತಿ ನೀಡಲಾಗಿದೆ. (ಸರ್ಕಾರದ ಆದೇಶಸಂಖ್ಯೆ.ಸಿಆಸುಇ/53/ಸೆನೆನಿ/2007, ದಿನಾಂಕ: 04.01.2008ರ ಪ್ರಕಾರ)

49. ಮಾಜಿ ಸೈನಿಕ ಅಭ್ಯರ್ಥಿಗಳು ಯಾವ ಪ್ರಮಾಣ ಪತ್ರಗಳನ್ನು ಸಲ್ಲಿಸಬೇಕಾಗುತ್ತದೆ ?

ಉ: ಮಾಜಿ ಸೈನಿಕ ಅಭ್ಯರ್ಥಿಗಳು ವಿದ್ಯಾರ್ಹತೆಗೆ ಸಂಬಂಧಿಸಿದಂತೆ ಪ್ರಮಾಣ ಪತ್ರದ ಜೊತೆಗೆ ಸೈನಿಕಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ / ನಿರಾಕ್ಷೇಪಣಾಪ್ರಮಾಣ ಪತ್ರ ಮತ್ತು ಜಾತಿ ಮೀಸಲಾತಿ ಕೋರಿದ್ದಲ್ಲಿ ಜಾತಿ ಪ್ರಮಾಣ ಪತ್ರ ಸಲ್ಲಿಸಬೇಕಾಗುತ್ತದೆ.

50. ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಅರ್ಜಿಸಲ್ಲಿಸಲು ಬೇಕಾಗಿರುವ ವಿದ್ಯಾರ್ಹತೆ ?

ಉ: ಮಾಜಿ ಸೈನಿಕನು ನಿಗದಿತ ವಿದ್ಯಾರ್ಹತೆಯನ್ನು ಅರ್ಜಿಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕ, ಅಂದರೆ 05.04.2015 ಕ್ಕೆ ಹೊಂದಿರಬೇಕು. (ಮಾಜಿಸೈನಿಕ ಅಭ್ಯರ್ಥಿಗಳು ವಿದ್ಯಾರ್ಹತೆಯ ಪ್ರಮಾಣ ಪತ್ರವನ್ನು ದಿನಾಂಕ 05.04.2015 ರೊಳಗೆ ಹೊಂದಿರುವಅಭ್ಯರ್ಥಿಗಳ ಅಭ್ಯರ್ಥಿತನವನ್ನು ಮಾತ್ರ ಪರಿಗಣಿಸಲಾಗುವುದು).

51. ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಸೈನ್ಯದಿಂದ ವಿಯೋಜನೆ ಹೊಂದುವಾಗ ನೀಡುವ ಗ್ರಾಜ್ಯುವೇಟ್‌ಪ್ರಮಾಣಪತ್ರದಿಂದ ಹೊಂದಿದ್ದರೆ ಅರ್ಜಿಸಲ್ಲಿಸಬಹುದೇ?

ಉ: ಮಾಜಿ ಸೈನಿಕನು ಎಸ್.ಎಸ್.ಎಲ್.ಸಿ ಉತ್ತೀರ್ಣ ಹೊಂದಿ, ಸೈನಿಕನಾಗಿ ಭರ್ತಿ ಹೊಂದಿ, ತದನಂತರ ಸೈನ್ಯದಿಂದ ವಿಯೋಜನೆ ಹೊಂದುವಾಗ, ಸೈನ್ಯದಿಂದ ಮಾಜಿ ಸೈನಿಕನಿಗೆ ನೀಡುವಗ್ರಾಜ್ಯುವೇಟ್ ಸರ್ಟಿಫಿಕೇಟ್ ಹೊಂದಿರುವ ಮಾಜಿಸೈನಿಕ ಅಭ್ಯರ್ಥಿಗಳು ಸದರಿ ಹುದ್ದೆಗೆ ಅರ್ಜಿಸಲ್ಲಿಸಲು ಅರ್ಹರಾಗಿರುತ್ತಾರೆ.

52. ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಲಿಖಿತ ಪರೀಕ್ಷೆಯ ನಂತರ ಮೇರಿಟ್ ಮೇಲೆ ತಾತ್ಕಾಲಿಕ ಆಯ್ಕೆಪಟ್ಟಿತಯಾರಿಸುವಾಗ ಯಾವ ರೀತಿಯಲ್ಲಿ ಪರಿಗಣಿಸುತ್ತೀರಿ?

ಉ: ಮಾಜಿ ಸೈನಿಕ ಅಭ್ಯರ್ಥಿಗಳು ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳು ಮತ್ತು ಮೌಖಿಕ ಪರೀಕ್ಷೆಯಲ್ಲಿಕೂಡಿಸಿ ಅದರ ಆಧಾರದ ಮೇಲೆ ಅರ್ಹತಾ ಪಟ್ಟಿಯನ್ನು ತಯಾರಿಸಲಾಗುವುದು.

53. ಮಾಜಿ ಸೈನಿಕ ಅಭ್ಯರ್ಥಿಗಳು ಒಮ್ಮೆ ಸರ್ಕಾರಿ ನೌಕರಿಗೆ ಮಾಜಿ ಸೈನಿಕ ಮೀಸಲಾತಿಯನ್ನು ಕೋರಿಆಯ್ಕೆಯಾದಲ್ಲಿ, ಮತ್ತೊಮ್ಮೆ ಮಾಜಿ ಸೈನಿಕ ಮೀಸಲಾತಿಯನ್ನು ಪಡೆಯಬಹುದೇ?

ಉ: ಇಲ್ಲ. ಮಾಜಿ ಸೈನಿಕರು ಅವರಿಗೆ ನೀಡಿರುವ ಪ್ರಯೋಜನವಾದ ಪುನರ್ ನೇಮಕವನ್ನುಉಪಯೋಗಿಸಿಕೊಂಡು ಒಂದು ಬಾರಿ ಸರ್ಕಾರಿ ಹುದ್ದೆಗೆ ಆಯ್ಕೆಯಾದಲ್ಲಿ ಅಂತಹ ಮಾಜಿಸೈನಿಕಸ್ಥಾನವು ಸರ್ಕಾರಿ ಉದ್ಯೋಗದ ಪುನರ್ ನೇಮಕಕ್ಕೆ ರದ್ದಾಗುತ್ತದೆ.

54. ಮಾಜಿ ಸೈನಿಕ ಅಭ್ಯರ್ಥಿಗಳು ಯಾವಾಗ ಅರ್ಜಿಯನ್ನು ಸಲ್ಲಿಸಬಹುದಾಗಿದೆ?

ಉ: ಸೈನಿಕ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತ ಹೊಂದಿದ ನಂತರ ಮಾಜಿ ಸೈನಿಕರವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನುಹೊಂದಲು ಅನುಮತಿ ನೀಡಲಾಗಿದ್ದು, ಅಂತಹ ಮಾಜಿ ಸೈನಿಕ ಅಭ್ಯರ್ಥಿಗಳು ಅರ್ಜಿಯನ್ನುಸಲ್ಲಿಸಬಹುದಾಗಿದೆ.

55. ಮಾಜಿ ಸೈನಿಕನ ಮಕ್ಕಳು ಸಹ ಮಾಜಿ ಸೈನಿಕ ಮೀಸಲಾತಿಯಲ್ಲಿ ಅರ್ಜಿಯನ್ನು ಸಲ್ಲಿಸಬಹುದೇ?

ಉ: ಸೇನೆಯಲ್ಲಿ ಸೇವೆ ನಿರ್ವಹಿಸಿ ಮರಣ ಅಥವಾ ಶಾಶ್ವತ ವಿಕಲತೆ ಹೊಂದಿದ ಮಾಜಿ ಸೈನಿಕರ ಮಕ್ಕಳುಅರ್ಜಿಯನ್ನು ಸಲ್ಲಿಸಬಹುದಾಗಿದೆ.

56. ಮಾಜಿ ಸೈನಿಕ ಮಕ್ಕಳಿಗೆ ಶೇಕಡ ಮೀಸಲಾತಿ ಎಷ್ಟು ಪರಿಗಣಸಲಾಗುವುದು ?

ಉ: ಮಾಜಿ ಸೈನಿಕ ಅಭ್ಯರ್ಥಿಗಳು 10% ಮೀಸಲಾತಿಯೊಳಗೆ ಮಾಜಿ ಸೈನಿಕ ಮಕ್ಕಳನ್ನು ಸಹಪರಿಗಣಿಸಲಾಗುವುದು. (ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ/53/ಸೆನೆನಿ/2007, ದಿನಾಂಕ:04.01.2008ರ ಪ್ರಕಾರ)

57. ಮಾಜಿ ಸೈನಿಕ ಮಕ್ಕಳಿಗೆ ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಯಲ್ಲಿ ವಿನಾಯಿತಿ ಉಂಟೆ?

ಉ: ಮಾಜಿ ಸೈನಿಕ ಮಕ್ಕಳಿಗೆ ದೇಹದಾಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಯಲ್ಲಿ ಸಡಿಲಿಕೆ ಇರುವುದಿಲ್ಲ ಮತ್ತು ಸಾಮಾನ್ಯಅಭ್ಯರ್ಥಿಗಳಿಗೆ ಇರುವ ಅರ್ಹತೆಯನ್ನು ಮಟ್ಟವನ್ನು ಪೂರ್ಣಗೊಳಿಸಬೇಕಾಗುತ್ತದೆ.

58. ಅಭ್ಯರ್ಥಿಗಳಿಗೆ ದೇಹದಾಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಮತ್ತು ಲಿಖಿತ ಪರೀಕ್ಷಗೆ ಕರೆ ಪತ್ರಗಳನ್ನುಅಂಚೆ ಮುಖಾಂತರ ಕಳುಹಿಸಲಾಗುವುದು?

ಉ: ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಯ ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗವಹಿಸುವಂತಹ ಅಭ್ಯರ್ಥಿಗಳಿಗೆ ದೇಹದಾಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಮತ್ತು ಲಿಖಿತ ಪರೀಕ್ಷೆಗೆ ಕರೆ ಪತ್ರಗಳನ್ನು ಅಂಚೆಯ ಮುಖಾಂತರಕಳುಹಿಸಲಾಗುವುದಿಲ್ಲ. ಪರೀಕ್ಷೆಯ ಕರೆ ಪತ್ರಗಳ ಅನ್‌ಲೈನ್‌ನಲ್ಲಿ ಲಭ್ಯವಿರುವುದು ಮತ್ತು ಅಭ್ಯರ್ಥಿ ಸ್ವತ: ಅನ್‌ಲೈನ್‌ನಿಂದ ಕರೆ ಪತ್ರಗಳನ್ನು ಡೌನ್‌ಲೋಡ್ ಮಾಡಿ ಮುದ್ರಿಸಿಕೊಂಡು ಪರೀಕ್ಷಗೆಕರೆಪತ್ರದೊಂದಿಗೆ ಹಾಜರಾಗತಕ್ಕದ್ದು.

59. ಕರೆಪತ್ರಗಳನ್ನು ತರದೆ ಪರೀಕ್ಷೆಗೆ ಹಾಜರಾಗಬಹುದೇ?

ಉ: ಆನ್‌ಲೈನ್‌ನಲ್ಲಿ ಲಭ್ಯವಿರುವ ಕರೆಪತ್ರಗಳನ್ನು ತರದೆ ಯಾವುದೇ ಅಭ್ಯರ್ಥಿಯನ್ನು ಪರೀಕ್ಷೆಗೆಹಾಜರಾಗಲು ಪರಿಗಣಿಸಲಾಗುವುದಿಲ್ಲ. ದೈಹಿಕ ಪರೀಕ್ಷಗೆ ಹಾಜರಾಗುವ ಆನ್‌ಲೈನ್ ಮುಂಖಾತರಸಲ್ಲಿಸಿದ ಅಭ್ಯರ್ಥಿಗಳು ಮುದ್ರಿತ ಅರ್ಜಿ ಜೆರಾಕ್ಸ್ ಪ್ರತಿಯೊಂದಿಗೆ ಬ್ಯಾಂಕ್‌ಗೆ ಶುಲ್ಕ ಪಾವತಿಸಿದ ಮೂಲಚಲನ್‌ನ ಪ್ರತಿಯನ್ನು ತಪ್ಪದೆ ಹಾಜರುಪಡಿಸತಕ್ಕದ್ದು.

60. ದೈಹಿಕ ಪರೀಕ್ಷೆಯ ಮತ್ತು ಲಿಖಿತ ಪರೀಕ್ಷೆಗೆ ಅರ್ಹನಾಗಿರುವ ಬಗ್ಗೆ ಮಾಹಿತಿ ಎಲ್ಲಿ ಲಭ್ಯವಾಗುತ್ತದೆ?

ಉ: ಪ್ರತಿ ಪರೀಕ್ಷೆಯ ಫಲಿತಾಂಶ ಮತ್ತು ಅಭ್ಯರ್ಥಿಯು ಅರ್ಹತೆ ಹೊಂದಿರುವ ಮಾಹಿತಿಯನ್ನುಆನ್‌ಲೈನ್‌ನಲ್ಲಿ ಪ್ರಕಟಿಸಲಾಗುವುದು.

61. ಎಂತಹ ಅಭ್ಯರ್ಥಿಗಳ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಬಹುದಾಗಿದೆ?

ಉ: ತಪ್ಪು ಮಾಹಿತಿಯನ್ನು ಅನ್‌ಲೈನ್‌ನಲ್ಲಿ ತುಂಬಿ ಪರೀಕ್ಷೆಯಲ್ಲಿ ಭಾಗವಹಿಸುವ ಅಭ್ಯರ್ಥಿಗಳ ಪರೀಕ್ಷೆಯಮುಂಚಿತವಾಗಿ ಮತ್ತು ಪರೀಕ್ಷೆಯ ನಂತರ ಕಂಡುಬಂದಲ್ಲಿ ಕಾನೂನು ರೀತ್ಯಾ ಸೂಕ್ತ ಕ್ರಮವನ್ನುಕೈಗೊಳ್ಳಲಾಗುವುದು.

62. ಆನ್–ಲೈನ್‌ನಲ್ಲಿ ಅರ್ಜಿ ಸಲ್ಲಿಸಲು ವೆಬ್–ಸೈಟ್ ಯಾವುದು ?

ಉ: ಆನ್–ಲೈನ್‌ನಲ್ಲಿ ಅರ್ಜಿ ಸಲ್ಲಿಸಲು ಹಾಗೂ ಮಾಹಿತಿಯನ್ನು ತಿಳಿದುಕೊಳ್ಳಲು ಅಧಿಕೃತ ವೆಬ್‌ಸೈಟ್www.ksfesonline.inನ್ನು ನೋಡುವುದು.

63. ವಸ್ತುನಿಷ್ಠ ಮಾದರಿ ಪ್ರಶ್ನೆಗಳ ನಕರಾತ್ಮಕ ಉತ್ತರಗಳಿಗೆ ಎಷ್ಟುಅಂಕಗಳನ್ನು ಕಳೆಯಲಾಗುತ್ತದೆ ?

ಉ: ವಸ್ತುನಿಷ್ಠ ಮಾದರಿ ಪ್ರಶ್ನೆಗಳ ತಪ್ಪು ಉತ್ತರಗಳಿಗೆ ಯಾವುದೇ ನಕರಾತ್ಮಕ ಅಂಕಗಳನ್ನು ಕಳೆಯಲಾಗುವುದಿಲ್ಲ.

64. ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗೆ ವೇತನ ಶ್ರೇಣಿ ಎಷ್ಟು?

ಉ: ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗೆ ವೇತನ ಶ್ರೇಣಿ ರೂ.16000–400–17200–450–19000–500–21000–600–24600–700–28800–800–29600ಇರುತ್ತದೆ.

65. ದೈಹಿಕ ಪರೀಕ್ಷೆಗೆ/ಲಿಖೀತ ಪರೀಕ್ಷೆಗೆ ಹಾಜರಾದಾಗ ಯಾವ ಗುರುತಿನ ಚೀಟಿಯನ್ನು ಹಾಜರುಪಡಿಸಬೇಕಾಗುತ್ತದೆ ?

ಉ: ಈ ಕೆಳಗಿನ ಯಾವುದಾದರೊಂದು ಭಾವಚಿತ್ರವುಳ್ಳ ಗುರುತಿನ ಚೀಟಿಯನ್ನು ತೋರಿಸಬೇಕು.

1) ಪಾಸ್‌ಪೋರ್ಟ್ (Passport)

2) ಚಾಲನಾ ಪರವಾನಗಿ ಪತ್ರ (Driving License)

3) ಪಾನ್ ಕಾರ್ಡ್ (PAN Card)

4) ರಾಜ್ಯ ಸರ್ಕಾರ/ ಕೇಂದ್ರ ಸರ್ಕಾರ / ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟಖಾಸಗಿ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ (Service ID Card)

5) ಸಾರ್ವಜನಿಕ ಬ್ಯಾಂಕುಗಳು / ಅಂಚೆ ಕಛೇರಿಗಳು ವಿತರಿಸಿರುವ ಭಾವಚಿತ್ರವಿರುವ ಪಾಸ್ ಪುಸ್ತಕ (Pass Book with Photograph)

6) ಭಾವಚಿತ್ರ ಸಮೇತ ನೋಂದಣಿಯಾಗಿರುವ ಸ್ವತ್ತಿನ ದಾಖಲೆಪತ್ರ ಅಥವಾ ಪಟ್ಟಾ ಪುಸ್ತಕ (Pattasand registered deeds with Photograph)

7) ಭಾವಚಿತ್ರ ಸಮೇತ ಸಂಬಂಧಪಟ್ಟ ಪ್ರಾಧಿಕಾರಿಯವರು ವಿತರಿಸಿರುವ ಜಾತಿ ಪ್ರಮಾಣ ಪತ್ರ (Community Certificate with Photo)

8) ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಿತರಿಸಿರುವ ಪಿಂಚಣಿ ಪುಸ್ತಕ / ಪಿಂಚಣಿ ಮಂಜೂರಾತಿ ಆಗಿರುವಆದೇಶ (Ex-servicemen's pension book/pension payment order)

9) ಎನ್.ಆರ್.ಇ.ಜಿ.ಎಸ್.ಯಿಂದ ನೀಡಿದ ಭಾವಚಿತ್ರವಿರುವ ಉದ್ಯೋಗ ಚೀಟಿ. (Job cards withPhotograph)

10) ಎಲೆಕ್ಟೋರಲ್ ಫೋಟೋ ಗುರುತಿನ ಚೀಟಿ (EPIC).

11) ಭಾರತೀಯ ಗುರುತು ಪ್ರಾಧಿಕಾರದಿಂದ ನೀಡಲಾಗಿರುವ ಆಧಾರ್ ಕಾರ್ಡ್ (AADHAR CARD).

66. ದೈಹಿಕ ಪರೀಕ್ಷಾ ಸಮಯದಲ್ಲಿ ಅಭ್ಯರ್ಥಿಗೆ ಶಾರೀರಕವಾಗಿ ಅನಾಹುತ ಸಂಭವಿಸಿದ ಪಕ್ಷದಲ್ಲಿ ನೇಮಕಾತಿಸಮಿಯು ಹೊಣೆಯಾಗಿದೆಯೇ?

ಉ: ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಹಾಜರಾಗುವ ಮುನ್ನ ಅಭ್ಯರ್ಥಿಗಳು ದೈಹಿಕವಾಗಿಸದೃಢರಿರಬೇಕು.ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯಪರೀಕ್ಷೆಯ ಸಂದರ್ಭದಲ್ಲಿ ಸಂಭವಿಸುವ ಯಾವುದೇರೀತಿಯ ಅನಾಹುತ/ ತೊಂದರೆಗಳಿಗೆ ಇಲಾಖೆ/ನೇಮಕಾತಿ ಸಮಿತಿಯ ಜವಾಬ್ದಾರರಾಗಿರುವುದಿಲ್ಲ.

ಅಭ್ಯರ್ಥಿಗಳು ಅವರ ಸ್ವಂತ ಹಿತ ದೃಷ್ಠಿಯಿಂದ ಅವರ ದೇಹದ ವೈದ್ಯಕೀಯ ಪರೀಕ್ಷೆಯನ್ನು ಮಾಡಿಸಿಕೊಂಡು,ಅಭ್ಯರ್ಥಿಯ ಆರೋಗ್ಯವು ಎಲ್ಲ ರೀತಿಯಿಂದಲೂ ಸದೃಢವಾಗಿದೆ ಎಂದು ಖಚಿತ ಪಡಿಸಿಕೊಂಡು ಇಲಾಖೆನಡೆಸುವ ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಎಲ್ಲ ವಿಧದಿಂದಲೂ ಅರ್ಹನೆಂದು ಮುಂಚಿತವಾಗಿಯೇತಿಳಿದುಕೊಂಡು ಹಾಜರಾಗತಕ್ಕದ್ದು.ಈ ದಿಸೆಯಲ್ಲಿ ಕನಿಷ್ಠ ಒಂದು ತಿಂಗಳ ಮುಂಚೆಯಿಂದಲೇ ದೇಹದಾರ್ಢ್ಯತೆ ಹಾಗೂ ದೈಹಿಕ ಸಾಮರ್ಥ್ಯಪರೀಕ್ಷೆಗೆ ಅಭ್ಯರ್ಥಿಗಳು ಸಾಕಷ್ಟು ಅಭ್ಯಾಸ ಮಾಡಿಕೊಳ್ಳತಕ್ಕದ್ದು.

67. ಅರ್ಜಿ ಶುಲ್ಕವನ್ನು ಯಾವ ವಿಧಾನದಲ್ಲಿ ಪಾವತಿಸಬೇಕು ?

ಉ: ಅರ್ಜಿ ಶುಲ್ಕವನ್ನು ನಗದು ರೂಪದಲ್ಲಿ ಎಸ್.ಬಿ.ಎಮ್ ಮತ್ತು ಎಸ್.ಬಿ.ಹೆಚ್ ಬ್ಯಾಂಕ್‌ನಲ್ಲಿ ಮಾತ್ರಪಾವತಿಸತಕ್ಕದ್ದು. ಡಿಡಿ, ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ.

68. ವಿಳಾಸದಲ್ಲಿ ಬದಲಾವಣೆ ಇದ್ದಲ್ಲಿ ಅದನ್ನು ಬದಲಾಯಿಸಬಹುದೇ ?

ಉ: ಇದಕ್ಕೆ ಸಂಬಂಧಿಸಿದಂತೆ ನೇಮಕಾತಿ ಸಮಿತಿಗೆ ಅರ್ಜಿಯನ್ನು ನೀಡಿ ನಂತರ ಅನುಮತಿಯ ಮೇಲೆವಿಳಾಸವನ್ನು ಬದಲಿಸಲು ಪ್ರಯತ್ನಿಸಲಾಗುವುದು.

69. ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಯಾವ ಪ್ರಮಾಣಪತ್ರವನ್ನು ಸಲ್ಲಿಸಬೇಕು?

ಉ: ಅಭ್ಯರ್ಥಿಯು ಅರ್ಜಿ ಹಾಕುವ ಸಮಯದಲ್ಲಿ ಯಾವುದೇ ಕೇಂದ್ರ / ರಾಜ್ಯ ಸರ್ಕಾರದ ಅಥವಾ ಸರ್ಕಾರದಯಾವುದೇ ಪ್ರಾಧಿಕಾರ ಅಥವಾ ಕೇಂದ್ರ ಅಥವಾ ರಾಜ್ಯ ಸಾರ್ವಜನಿಕ ಸ್ವಾಮ್ಯಗಳಲ್ಲಿ ನೌಕರಿಯಲ್ಲಿದ್ದಲ್ಲಿಅಂತಹವರು ಇಲಾಖಾ ಮುಖ್ಯಸ್ಥರ ಅಥವಾ ನೇಮಕಾತಿ ಪ್ರಾಧಿಕಾರಿಯಿಂದ ಸೂಕ್ತ ದೃಢೀಕರಣದಸಹಿಯೊಂದಿಗೆ ಸಮುಚಿತ ಮಾರ್ಗದಲ್ಲಿ ಅರ್ಜಿಯನ್ನು ಸಲ್ಲಿಸಬೇಕು ಹಾಗೂ ಪೊಲೀಸ್ ಇಲಾಖೆಯಲ್ಲಿ ನೇಮಕಗೊಂಡಲ್ಲಿ ಅಗ್ನಿಶಾಮಕ ಸೇವೆಗೆ ಕರ್ತವ್ಯದಿಂದ ಬಿಡುಗಡೆ ಮಾಡಲು ಅನುಮತಿ ಪತ್ರ / ನಿರಾಕ್ಷೇಪಣಪ್ರಮಾಣಪತ್ರವನ್ನು (No Objection Certificate) ನಿಗದಿ ಪಡಿಸಿದ ದಿನಾಂಕದೊಳಗೆಪಡೆದಿಟ್ಟುಕೊಂಡಿದ್ದು ನೇಮಕಾತಿ ಸಮಿತಿಯು ಸೂಚಿಸಿದಾಗ ಹಾಜರುಪಡಿಸತಕ್ಕದ್ದು.

70. ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆಗೆ ಯಾರು ಅನರ್ಹರೆಂದು ಪರಿಗಣಿಸುತ್ತೀರಿ?

ಉ: 1. ಅರ್ಜಿ ಸಲ್ಲಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗಿರುವುದಿಲ್ಲ.

2. ಭೂಸೇನೆ, ನೌಕಾಸೇನೆ ಮತ್ತು ವಾಯುಸೇನೆಯಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿಯನ್ನು ಹೊರತು ಪಡಿಸಿ, ಡಿಫೆನ್ಸ್‌ಸೆಕ್ಯುರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ್ ಸಹಾಯಕ್ ಸೇನಾ ಮತ್ತುಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ ಮತ್ತುಅಂತಹ ಸೇನೆಯಿಂದ ನಿವೃತ್ತಿ ವೇತನ ಪಡೆಯುತ್ತಿರುವ ಅಥವಾ ವೈದ್ಯಕೀಯ ಕಾರಣಗಳಿಂದ ಮಿಲಿಟರಿಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು. ಅಥವಾ ಸ್ವಂತಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದವ್ಯಕ್ತಿ ಅಥವಾ ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು.

ಎ. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.

ಬಿ. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯ ಹೊಂದಿ ಬಿಡುಗಡೆಯಾದ ವ್ಯಕ್ತಿ.

ಸಿ. ಶೌರ್ಯ ಪ್ರಶಸ್ತಿ ವಿಜೇತರು ಹಾಗೂ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

3. ಕರ್ನಾಟಕ ರಾಜ್ಯದ, ಕೇಂದ್ರ ಸರ್ಕಾರದ ಯಾವುದೇ ಸರ್ಕಾರಿ ಹಾಗೂ ಅರೆ ಸರ್ಕಾರಿ ಸಂಸ್ಥೆಯಸೇವೆಯಿಂದ ವಜಾಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

4. ಯಾವುದೇ ಅರ್ಜಿದಾರರು ಕ್ರಿಮಿನಲ್ ಮೊಕದ್ದಮೆಯಲ್ಲಿ ಶಿಕ್ಷೆಗೆ ಗುರಿಯಾಗಿರಬಾರದು. ಕ್ರಿಮಿನಲ್ಮೊಕದ್ದಮೆಯಲ್ಲಿ ಭಾಗಿಯಾಗಿ ಬಿಡುಗಡೆ / ಖುಲಾಸೆಯಾಗಿದ್ದಲ್ಲಿ ನೇಮಕಾತಿ ಪ್ರಾಧಿಕಾರವು ತೆಗೆದು ಕೊಳ್ಳುವತೀರ್ಮಾನವೇ ಅಂತಿಮವಾಗಿರುತ್ತದೆ.

71. ಅರ್ಹ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವಾಗ ಯಾವ ಪ್ರಮಾಣಪತ್ರಗಳು ಸಲ್ಲಿಸಬೇಕಾಗಿರುತ್ತದೆ.?

ಉ: ಅರ್ಹ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವಾಗ ಯಾವುದೇ ಮೂಲ ಪ್ರಮಾಣ ಪತ್ರಗಳನ್ನುಸಲ್ಲಿಸಬೇಕಾಗಿರುವುದಿಲ್ಲ, ಆದರೆ ಪ್ರಮಾಣಪತ್ರದ ಮಾಹಿತಿ ಮತ್ತು ಪ್ರಮಾಣಪತ್ರ ಪಡೆದ ದಿನಾಂಕನಮೂದಿಸಬೇಕಾಗಿರುತ್ತದೆ.ತದ ನಂತರ ಅರ್ಹ ಅಭ್ಯರ್ಥಿಗಳು ಮೂಲ ದಾಖಲಾತಿ ಪರಿಶೀಲನಾಸಂದರ್ಭದಲ್ಲಿ ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿಗಳಿಗೆ ಪೂರಕವಾಗಿ ಸದರಿ ದಾಖಲಾತಿ /ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ತಪ್ಪದೇ ಹಾಜರುಪಡಿಸಬೇಕು ಹಾಗು ಅರ್ಜಿಸಲ್ಲಿಸಲುನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡಿದರಬೇಕು. ತಪ್ಪಿದ್ದಲ್ಲಿ ಅಂತಹ ಮೀಸಲಾತಿಯನ್ನುರದ್ದುಪಡಿಸಲಾಗುವುದು.ಒಂದು ವೇಳೆ ಸಲ್ಲಿಸಿ ಕಳೆದು ಹೋದರೆ ನೇಮಕಾತಿ ಸಮಿತಿಯುಜವಾಬ್ದಾರಿಯಾಗುವುದಿಲ್ಲ.

72. ಅಭ್ಯರ್ಥಿಗಳು ನೇಮಕಾತಿಯ ಯಾವುದೇ ನಿಯಮಗಳನ್ನು ಪ್ರಶ್ನಿಸಬಹುದೇ?

ಉ: ಅಭ್ಯರ್ಥಿಯು ಹುದ್ದೆಗೆ ಅರ್ಜಿ ಸಲ್ಲಿಸಿದ ತಕ್ಷಣ ತಾನು ನಿಯಮ ಮತ್ತು ವಿನಿಯಮಗಳಿಗೆ ಬದ್ಧನಾಗಿರುತ್ತಾನೆಎಂದು ಭಾವಿಸಲಾಗಿರುತ್ತದೆ. ಒಂದು ವೇಳೆ ತಾನು ಸದರಿ ಹುದ್ದೆಗೆ ಆಯ್ಕೆಯಾಗದ ಪಕ್ಷದಲ್ಲಿ ತದನಂತರಅದೇ ನಿಯಮಗಳನ್ನು ಪ್ರಶ್ನಿಸಲು ಬರುವುದಿಲ್ಲ.

73. ಪರೀಕ್ಷೆ ಮುಗಿದ ವೆಬ್‌ಸೈಟ್‌ನಲ್ಲಿ ಪ್ರಾವಿಷನಲ್ ಕೀ ಉತ್ತರವನ್ನು ಪ್ರಶ್ನೀಸಬಹುದೇ?

ಉ: ಪರೀಕ್ಷೆ ಮುಗಿದ ಒಂದು ಅಥವಾ ಎರಡು ದಿನಗಳ ನಂತರ Provisional Answer Key ಉತ್ತರಗಳನ್ನುವೆಬ್‌ಸೈಟ್‌ನಲ್ಲಿ ಹಾಗೂ ಸಂಬಂಧಪಟ್ಟ ಘಟಕಗಳಲ್ಲಿ ಪ್ರಕಟಿಸಲಾಗುವ್ಯದು. ಅಭ್ಯರ್ಥಿಗಳು ಉತ್ತರಗಳ ಬಗ್ಗೆಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದಕ್ಕೆ ಒಂದು ವಾರದ ಕಾಲಾವಕಾಶವನ್ನು ನೀಡಲಾಗುವುದು.ಆಕ್ಷೇಪಣೆಗಳು ಬಂದ ನಂತರ ಅದನ್ನು ಒಂದು ನುರಿತ ಸಮಿತಿ(ಕಮಿಟಿ)ಗೆ ನೀಡಿ ಅವರಿಂದ ಸರಿಯಾದಉತ್ತರಗಳನ್ನು ಪಡೆದು Final Answer Key ಯನ್ನು ಪ್ರಕಟಿಸಲಾಗುವುದು ಮತ್ತು ಈ ಅಂತಿಮ ಉತ್ತರಕೀಗಳ ಪ್ರಕಾರ ಒ ಎಂ ಆರ್ ಉತ್ತರ ಪತ್ರಿಕೆಯನ್ನು ಮೌಲ್ಯಮಾಪನ ಮಾಡಲಾಗುವುದು.

74. ಅಭ್ಯರ್ಥಿಗಳಿಗೆ ಪತ್ರ ವ್ಯವಹಾರಕ್ಕೆ ಅವಕಾಶವಿರುವುದೇ?

ಉ: ಅಭ್ಯರ್ಥಿಯ ಅಂತರ್‌ಜಾಲದಲ್ಲಿ ಅರ್ಜಿಯನ್ನು ತುಂಬುವಾಗ ನೀಡಿರುವ ಮಾಹಿತಗಳ ಅನ್ವಯಸಮರ್ಪಕವಾಗಿ ಭರ್ತಿ ಮಾಡಿದೆ, Junk Character / Unknown language ತುಂಬಿದ ಅರ್ಜಿಗಳನ್ನು ತಿರಸ್ಕೃತವಾದಲ್ಲಿ ತತ್ಸಂಬಂಧ ಯಾವುದೇ ರೀತಿಯ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

**ವಿಶೇಷಸೂಚನೆ :–**

**1) ನಿಗದಿ ಪಡಿಸಿರುವ ನಮೂನೆಯ ಜಾತಿ / ಪ್ರವರ್ಗ ಪ್ರಮಾಣ ಪತ್ರಗಳು,ಯೋಜನಾ ನಿರಾಶ್ರಿತ ಪ್ರಮಾಣ ಪತ್ರ, ಕನ್ನಡ ಮಾಧ್ಯಮ ಪ್ರಮಾಣಪತ್ರ,ಗ್ರಾಮೀಣ ಪ್ರಮಾಣಪತ್ರ ಮತ್ತು ಮಾಜಿಸೈನಿಕನ ವಿಯೋಜನೆ ಪ್ರಮಾಣ ಪತ್ರ(ಪೂರ್ವಾನುಮತಿ)ಗಳನ್ನುಹಾಗೂ ಹೈದರಾಬಾದ್–ಕರ್ನಾಟಕ ಮೀಸಲಾತಿ ಬಯಸುವ ಅಭ್ಯರ್ಥಿಗಳು ಅರ್ಹತಾ ಪ್ರಮಾಣ ಪತ್ರವನ್ನು,ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಗಳಿಂದ ಪಡೆದಿಟ್ಟುಕೊಂಡಿರತಕ್ಕದ್ದು.**

**2) ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳಿಗೆ ದೈಹಿಕ ಪರೀಕ್ಷೆ, ಲಿಖಿತ ಪರೀಕ್ಷೆ ಮತ್ತು ವೈದ್ಯಕೀಯ ಪರೀಕ್ಷೆಗೆ ನಡೆಯುವುದರ ಬಗ್ಗೆ ಅರ್ಹಗೊಂಡ ಅಭ್ಯರ್ಥಿಗಳಿಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲಮತ್ತು ಅಭ್ಯರ್ಥಿಗಳು ಇಲಾಖೆಯ ಅಧಿಕೃತ ವೆಬ್‌ಸೈಟ್‌ನಮುಖಾಂತರ ಪಡೆಯಬಹುದಾಗಿದೆ.**

**3) ಇನ್ನೂ ಹೆಚ್ಚಿನ ಮಾಹಿತಿ ಬೇಕಿದ್ದಲ್ಲಿ ನೇಮಕಾತಿ ಕಛೇರಿಯ ಈ ಕೆಳಕಂಡ ಸಹಾಯವಾಣಿಯ ಸಂಖ್ಯೆ ಮತ್ತು ಇಮೇಲ್ ನಿಂದ ಪಡೆಯಬಹುದಾಗಿರುತ್ತದೆ ಹಾಗೂ ಅರ್ಜಿ ತುಂಬುವ ವಿಧಾನ ಇಲಾಖೆಯಅಧಿಕೃತ ವೆಬ್‌ಸೈಟ್ www.ksfesonline.inನಲ್ಲಿನ ಮಾಹಿತಿ ಸೂಚಿಯಲ್ಲಿ ಲಭ್ಯವಿರುತ್ತದೆ.**

**ಸಹಾಯವಾಣಿ ಸಂಖ್ಯೆಗಳು:**

ನೇಮಕಾತಿ ಘಟಕ, ಬೆಂಗಳೂರು

080–22971605/06

ಇ–ಮೇಲ್ ವಿಳಾಸ :recruitment2015@ksfes.gov.in

**ಸದಸ್ಯ ಕಾರ್ಯದರ್ಶಿ ಹಾಗೂ**

**ಪೊಲೀಸ್ ಮಹಾ ನಿರೀಕ್ಷಕರು ಹಾಗೂ**

**ಹೆಚ್ಚುವರಿ ಮಹಾ ನಿರ್ದೇಶಕರು**

**ಅಗ್ನಿಶಾಮಕ ಠಾಣಾಧಿಕಾರಿ ನೇಮಕಾತಿ ಸಮಿತಿ**

**ಬೆಂಗಳೂರು–560 042.**

# ವಿಶೇಷ ರಾಜ್ಯ ಪತ್ರಿಕೆ

| ಭಾಗ – V | ಬೆಂಗಳೂರು, ಸೋಮವಾರ, ಮಾರ್ಚ್ ೧೬, ೨೦೧೫ (ಫಾಲ್ಗುಣ ೨೫, ಶಕ ವರ್ಷ ೧೯೩೬) | ನಂ. ೨೧೭ |
|---|---|---|
| Part – V | Bengaluru, Monday, March 16, 2015 (Phalguna 25, Shaka Varsha 1936) | No. 217 |


**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ**

**ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು–560 001**

**ಅಧಿಸೂಚನೆ**

**ಸಂಖ್ಯೆಃ ಕರಾಆಃಆಡಳಿತಃ28ಃ2015, ದಿನಾಂಕಃ 12.03.2015**

ವಿಷಯಃ– ಕರ್ನಾಟಕ ರಾಜ್ಯದಲ್ಲಿರುವ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಅಧ್ಯಕ್ಷರ ಹುದ್ದೆಗಳನ್ನು ಭರ್ತಿ ಮಾಡಲು ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

ಕರ್ನಾಟಕ ರಾಜ್ಯದಲ್ಲಿರುವ ಈ ಕೆಳಕಂಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಲ್ಲಿ ಖಾಲಿ ಇರುವ ಹಾಗೂ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಮುಂದೆ ನಮೂದಿಸಿರುವ ದಿನಾಂಕಕ್ಕೆ ಖಾಲಿಯಾಗಲಿರುವ ಅಧ್ಯಕ್ಷರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ನಿಗಧಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ವಿವರ ಈ ಕೆಳಗಿನಂತಿದೆ:–

| ಕ್ರಮ ಸಂ | ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಹೆಸರು | ಖಾಲಿ ಇರುವ ಹಾಗೂ ಖಾಲಿಯಾಗುವ ಅಧ್ಯಕ್ಷರ ಹುದ್ದೆಗಳು |
|---|---|---|
| 1. | ಬೆಂಗಳೂರು ನಗರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 2. | ಬೆಂಗಳೂರು ನಗರ 3ನೇ ಹೆಚ್ಚುವರಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 3. | ಬಾಗಲಕೋಟೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 4. | ಬಳ್ಳಾರಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 5. | ಬೆಳಗಾವಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 6. | ಬೀದರ್ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 7. | ಬಿಜಾಪುರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 8. | ಚಾಮರಾಜನಗರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 9. | ದಾವಣಗೆರೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 10. | ಗದಗ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 11. | ಗುಲ್ಬರ್ಗಾ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 12. | ಹಾವೇರಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 13. | ಮೈಸೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 14. | ರಾಯಚೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 15. | ಶಿವಮೊಗ್ಗ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 16. | ತುಮಕೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 17. | ಉಡುಪಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 18. | ಉತ್ತರ ಕನ್ನಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 19. | ಯಾದಗಿರಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 |
| 20. | ಚಿತ್ರದುರ್ಗ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01<br>(ದಿನಾಂಕ 13.08.2015 ರಿಂದ ಖಾಲಿಯಾಗುವ ಹುದ್ದೆಗೆ) |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment WPP No. 297



| ಕ್ರಮ ಸಂ | ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಹೆಸರು | ಖಾಲಿ ಇರುವ ಹಾಗೂ ಖಾಲಿಯಾಗುವ ಅಧ್ಯಕ್ಷರ ಹುದ್ದೆಗಳು |
|---|---|---|
| 21. | ಕೊಪ್ಪಳ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 (ದಿನಾಂಕ 23.06.2015 ರಿಂದ ಖಾಲಿಯಾಗುವ ಹುದ್ದೆ) |
| 22. | ಮಂಡ್ಯ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ | 01 (ದಿನಾಂಕ 11.04.2015 ರಿಂದ ಖಾಲಿಯಾಗುವ ಹುದ್ದೆ) |
| | **ಒಟ್ಟು** | **22** |

1. **ವಿದ್ಯಾರ್ಹತೆ ಮತ್ತು ಅನುಭವ**

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(a) ರನ್ವಯ, ಜಿಲ್ಲಾ ನ್ಯಾಯಾಧೀಶರಾಗಿ ಸೇವೆಸಲ್ಲಿಸುತ್ತಿರುವ ಅಥವಾ ಜಿಲ್ಲಾ ನ್ಯಾಯಾಧೀಶರಾಗಿ ಸೇವೆಸಲ್ಲಿಸಿದವರು ಅಥವಾ ಜಿಲ್ಲಾ ನ್ಯಾಯಾಧೀಶರಾಗಿ ಆಯ್ಕೆ ಹೊಂದಲು ಅರ್ಹರಿರುವವರು ಅರ್ಜಿ ಸಲ್ಲಿಸಲು ಅರ್ಹರಿರುತ್ತಾರೆ.

2. **ಅಧ್ಯಕ್ಷರ ಸೇವಾವಧಿ**

ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಸೇವಾವಧಿಯು ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(2)ರನ್ವಯ 5 ವರ್ಷ ಅಥವಾ 65 ವರ್ಷ ವಯಸ್ಸು ಪೂರ್ಣವಾಗುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ.

3. **ಅಧ್ಯಕ್ಷರ ವೇತನ ಮತ್ತು ಭತ್ಯೆಗಳು**

ಕರ್ನಾಟಕ ಗ್ರಾಹಕ ಸಂರಕ್ಷಣಾ ನಿಯಮಗಳು 1988ರ ನಿಯಮ 3(1) ರನ್ವಯ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಹುದ್ದೆಗೆ ಆಯ್ಕೆಗೊಂಡವರು ಜಿಲ್ಲಾ ನ್ಯಾಯಾಧೀಶರ ವೃಂದದ ವೇತನ ಮತ್ತು ಕರ್ನಾಟಕ ರಾಜ್ಯ ಸರ್ಕಾರದಿಂದ ಕಾಲಕಾಲಕ್ಕೆ ನೀಡುವ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

4. **ಆಯ್ಕೆ ವಿಧಾನ**

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1A) ರಡಿಯಲ್ಲಿನ ಆಯ್ಕೆ ಸಮಿತಿಯ ಮೂಲಕ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

ಅರ್ಜಿ ಸಲ್ಲಿಸಲು ಇಚ್ಛಿಸುವಂತಹ ಅರ್ಹ ಅಭ್ಯರ್ಥಿಗಳು ಆಯ್ಕೆ ಬಯಸುವ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಹೆಸರನ್ನು ನಿಗಧಿತ ಒಂದೇ ಅರ್ಜಿ ನಮೂನೆಯಲ್ಲಿ ಸ್ಪಷ್ಟವಾಗಿ ನಮೂದಿಸಿ, ನಿಗಧಿತ ಅರ್ಜಿಯನ್ನು ಪೂರ್ಣವಾಗಿ ಭರ್ತಿ ಮಾಡಿ, ಜನ್ಮ ದಿನಾಂಕ, ವಿದ್ಯಾರ್ಹತೆ ಹಾಗೂ ಅನುಭವಕ್ಕೆ ಸಂಬಂಧಪಟ್ಟ ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಹಾಗೂ ರೂ.100/-ಗಳ ಭಾರತೀಯ ಪೋಸ್ಟಲ್ ಆರ್ಡರ್/ಡಿ.ಡಿ.ಯನ್ನು ಅಧ್ಯಕ್ಷರು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಬೆಂಗಳೂರು, ಇವರ ಹೆಸರಿನಲ್ಲಿ ಪಡೆದು ಅರ್ಜಿಯಲ್ಲಿ ಶುಲ್ಕದ ವಿವರಗಳನ್ನು ಬರೆದು ಅರ್ಜಿಯೊಂದಿಗೆ ಲಗತ್ತಿಸಿ (ಆಯ್ಕೆ ಬಯಸಿರುವ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳ ಹೆಸರುಗಳನ್ನು ನಿಗಧಿತ ಒಂದೇ ಅರ್ಜಿ ಸಮೂನೆಯಲ್ಲಿ ನಮೂದಿಸುವುದು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆವಾರು ಹುದ್ದೆಗಳಿಗೆ ಪ್ರತ್ಯೇಕ ಅರ್ಜಿ ಸಲ್ಲಿಸುವ ಅವಶ್ಯಕತೆ ಇರುವುದಿಲ್ಲ ಹಾಗೂ ಒಂದು ಅಥವಾ ಒಂದಕ್ಕಿಂತ ಹೆಚ್ಚು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗೆ ಆಯ್ಕೆ ಬಯಸಿದ್ದರೂ ಸಹ ರೂ.100/-ಗಳ ಒಂದು ಭಾರತೀಯ ಪೋಸ್ಟಲ್ ಆರ್ಡರ್/ಡಿ.ಡಿ.ಯನ್ನು ಮಾತ್ರ ಪಡೆದು ನಿಗಧಿತ ಅರ್ಜಿಯಲ್ಲಿ ವಿವರ ಬರೆದು ಅರ್ಜಿಯೊಂದಿಗೆ ಸಲ್ಲಿಸುವುದು) **ದಿನಾಂಕ: 05.05.2015ರ ಸಂಜೆ 5-00 ಘಂಟೆಯೊಳಗಾಗಿ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು-560001 ಇವರಿಗೆ ತಲುಪುವಂತೆ ಸಲ್ಲಿಸುವುದು.**

ನಿಗಧಿತ ದಿನಾಂಕ ಹಾಗೂ ಸಮಯದ ನಂತರ ಅಂಚೆ/ಕೊರಿಯರ್ ಮೂಲಕ ಅಥವಾ ನೇರವಾಗಿ ಬರುವಂತಹ ಯಾವುದೇ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ನಿಗಧಿತ ಅರ್ಜಿ ನಮೂನೆಯು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ವೆಬ್‌ಸೈಟ್ http://kscdrc.kar.nic.in ನಲ್ಲಿ ಲಭ್ಯವಿದ್ದು, ಸಂಬಂಧಪಟ್ಟ ಅರ್ಹ ಅಭ್ಯರ್ಥಿಗಳು ವೆಬ್‌ಸೈಟಿನಿಂದ ಅರ್ಜಿ ನಮೂನೆಯನ್ನು ನೇರವಾಗಿ ಪಡೆದುಕೊಳ್ಳಬಹುದಾಗಿದೆ ಅಥವಾ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ನೇರವಾಗಿ ಪ್ರತಿ ಅರ್ಜಿಗೆ ರೂ.50/-ಗಳ ನಗದನ್ನು ಪಾವತಿ ಮಾಡಿ ಅರ್ಜಿಯನ್ನು ಪಡೆದುಕೊಳ್ಳಬಹುದು.

**ನ್ಯಾಯಮೂರ್ತಿ ಬಿ.ಎಸ್. ಇಂದ್ರಕಲಾ**
ಅಧ್ಯಕ್ಷರು
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ
ಬೆಂಗಳೂರು

ಮುದ್ರಕರು ಹಾಗೂ ಪ್ರಕಾಶಕರು:- ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59